

# ಸಿದ್ಧಗಂಗಾ

ಜುಲೈ ೨೦೦೦






ಬೆಂಗಳೂರಿನಲ್ಲಿ ಬಸವ ವೇದಿಕೆ ಏರ್ಪಡಿಸಿದ್ದ 'ಬಸವ ಜಯಂತಿ' ಮತ್ತು 'ಬಸವಶ್ರೀ' ಹಾಗೂ 'ಸಾಹಿತ್ಯಶ್ರೀ' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಜ್ಯೋತಿ ಬೆಳಗಿಸುತ್ತಿರುವುದು. ಈ ಸಂದರ್ಭದಲ್ಲಿ ಗದುಗಿನ ತೋಂಟದಾರ್ಯ ಸಂಸ್ಥಾನದ ಡಾ. ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು, 'ಬಸವಶ್ರೀ' ಪ್ರಶಸ್ತಿ ಪುರಸ್ಕೃತ ಡಾ. ದೇ. ಜವರೇಗೌಡ, ಬಸವ ವೇದಿಕೆಯ ಗೌರವಾಧ್ಯಕ್ಷ ಶ್ರೀ ಬಸವರಾಜ ಬೊಮ್ಮಾಯಿ, ಕಾರ್ಯಾಧ್ಯಕ್ಷ ಶ್ರೀ ಸಿ. ಸೋಮಶೇಖರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

**ಮುದ್ರಕರು :**
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭


ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೬ ಜುಲೈ ೨೦೦೦ ಸಂಚಿಕೆ : ೭

## ಒಳಪುಟಗಳಲ್ಲಿ ......




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪



**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೬೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

# ಶ್ರೀಮಠದಲ್ಲಿ ಮಕ್ಕಳಜಾತ್ರೆ...

ಕರ್ನಾಟಕ ರಾಜ್ಯದ ಇಪ್ಪತ್ತೇಳು ಜಿಲ್ಲೆಗಳ ನೂರೆಪ್ಪತ್ತೈದು ತಾಲ್ಲೂಕುಗಳ ವಿದ್ಯಾರ್ಥಿಗಳನ್ನು ಕಾಣಬೇಕೆನ್ನುತ್ತೀರಾ. ಹಾಗಾದರೆ ಬನ್ನಿ. ಇಲ್ಲಿ ಅವರೆಲ್ಲರನ್ನು ಕಾಣುವ, ಅವರ ಭಾವನೆಗಳನ್ನು, ಕನಸುಗಳನ್ನು ಕಾಣುವ ಭಾಗ್ಯ ನಿಮ್ಮದಾಗುತ್ತದೆ. ಇಲ್ಲಿ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಹಳೆಯ ಮೈಸೂರು, ಹೊಸ ಮೈಸೂರು ಎಂಬ ಭಾವನೆ ಇಲ್ಲ. ಎಲ್ಲರೂ ಇಲ್ಲಿ ಮಾಡುವ ಊಟ ಒಂದೇ, ವಾಸಿಸುವ ನಿಲಯಗಳು ಒಂದೇ ಕಡೆ, ಕಲಿಯಲು ಎಲ್ಲರಿಗೂ ಮುಕ್ತ ಅವಕಾಶ. ಸಂಸ್ಕೃತ ಭಾಷೆಯ ಅಭ್ಯಾಸ ಇಲ್ಲಿ ಎಲ್ಲರಿಗೂ ಲಭ್ಯ. ಐದು ಸಾವಿರಕ್ಕೂ ಹೆಚ್ಚು ಮಕ್ಕಳು ಸಂಸ್ಕೃತ ಕಲಿಯುತ್ತಿದ್ದಾರೆ. ವೇದ ಕಲಿಯಲು ನಿರ್ಬಂಧವಿಲ್ಲ. ಜಾತಿಯ ಸೊಗಡಿಲ್ಲ. ಇಂಥದೊಂದು ಸೇವಾಸಂಸ್ಥೆ ರಾಷ್ಟ್ರದಲ್ಲಿಯೇ ಏಕೆ, ಜಗತ್ತಿನಲ್ಲಿ ಎಲ್ಲಿಯೂ ಕಾಣುವುದಿಲ್ಲ ಎಂಬ ಅನೇಕ ಗಣ್ಯರ, ಮಾನ್ಯರ ನುಡಿಗಳಿಗೆ ಇಂಬು ನೀಡಿದ ಶ್ರೀಮಠದಲ್ಲಿ ಈ ವರ್ಷ ಆಶ್ರಯ ಪಡೆದ ವಿದ್ಯಾರ್ಥಿಗಳ ಸಂಖ್ಯೆ ಏಳು ಸಹಸ್ರಕ್ಕೂ ಹೆಚ್ಚು. ಪ್ರವೇಶ ಕೋರಿ ಬಂದ ಮಕ್ಕಳ, ಅವರ ಪೋಷಕರ ಬಾಹುಳ್ಯವನ್ನು ಕಂಡ ಪತ್ರಿಕೆಗಳು 'ಮಕ್ಕಳ ಜಾತ್ರೆ' ಶ್ರೀಮಠದಲ್ಲಿ ಎಂದು ವರದಿ ಮಾಡಿದವು. ದೂರದ ಜಿಲ್ಲೆಗಳಾದ ಬೀದರ್, ಬಿಜಾಪುರ, ಬಳ್ಳಾರಿ, ಗುಲ್ಬರ್ಗ, ರಾಯಚೂರು, ಧಾರವಾಡ, ಬಾಗಲಕೋಟೆ, ಗದಗಗಳಿಂದ ಬಂದ ವಿದ್ಯಾರ್ಥಿಗಳು ಇನ್ನೂ ಹಸುಳೆಗಳು. ಒಂದನೆ ತರಗತಿಯಿಂದ ಹಿಡಿದು ಕಾಲೇಜು ತರಗತಿವರೆಗೆ, ಸ್ನಾತಕೋತ್ತರ ವರ್ಗದವರೆಗೆ ಸೇರುವ ವಿದ್ಯಾರ್ಥಿಗಳು ಅವರು. ಶ್ರೀಮಠ ವೀರಶೈವ ವಿರಕ್ತ ಸಂಪ್ರದಾಯಕ್ಕೆ ಸೇರಿರುವುದಾದರೂ ಎಲ್ಲ ಜನಾಂಗದ, ಜಾತಿಯ, ಕುಲದ, ಪಂಗಡದ ಮಕ್ಕಳಿಗೆ ಅವಕಾಶ ಕಲ್ಪಿಸಿರುವ **'ಜಾತ್ಯತೀತ'** ಸಂಸ್ಥೆ. ಭಾರತೀಯ ಸಂವಿಧಾನವನ್ನು ಆಚರಿಸಿ ತೋರಿಸುತ್ತಿರುವ ಕೇಂದ್ರ. ಅರ್ಹರಾದ ಎಲ್ಲರಿಗೆ ಶಿಕ್ಷಣ ನೀಡಬೇಕೆಂಬ ಸಂವಿಧಾನವನ್ನು ಗೌರವಿಸುತ್ತಿರುವ ಕಾರ್ಯವಿಧಾನ.

**ಜನಪ್ರತಿನಿಧಿಗಳ ಕರ್ತವ್ಯ**

ಸರ್ಕಾರದ ಆಡಳಿತ ಸೂತ್ರವನ್ನು ಕೈಹಿಡಿದು ನಡೆಸುತ್ತಿರುವ ರಾಜ್ಯದ ಎಲ್ಲ ಜಿಲ್ಲೆಗಳ ಚುನಾವಣಾ ಕ್ಷೇತ್ರಗಳ ಲೋಕಸಭಾ ಸದಸ್ಯರು, ರಾಜ್ಯಸಭಾ ಸದಸ್ಯರು, ವಿಧಾನಸಭಾ ಸದಸ್ಯರು, ವಿಧಾನ ಪರಿಷತ್ ಸದಸ್ಯರು ತಮ್ಮತಮ್ಮ ಕ್ಷೇತ್ರಗಳಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತೆ ವಿದ್ಯಾರ್ಥಿನಿಲಯಗಳನ್ನು ತೆರೆದು ಅವಕಾಶ ಕಲ್ಪಿಸಿಕೊಡುವುದು ಅವರ ಆದ್ಯ ಕರ್ತವ್ಯ. ಏಕೆಂದರೆ ಜನಪ್ರತಿನಿಧಿಗಳು ದೂರದರ್ಶಿಗಳು ಎಂಬ ನಂಬಿಕೆ ಜನಸಾಮಾನ್ಯರದ್ದು. ಅಂತಹ ಅವಕಾಶವಂಚಿತರಾದ ಸಾವಿರಾರು ಮಕ್ಕಳು ಇಂದು ಶ್ರೀಮಠದ ಆಶ್ರಯದಲ್ಲಿ ಅರಳುತ್ತಿದ್ದಾರೆ. ತಮ್ಮ ಭವಿಷ್ಯದ ಬಾಳಿಗೆ ದಾರಿ ಕಂಡುಕೊಳ್ಳುತ್ತಿದ್ದಾರೆ. ಇಂತಹ ಸಂದರ್ಭದಲ್ಲಿ ಜನಪ್ರತಿನಿಧಿಗಳು, ಸರ್ಕಾರ ಹೊರಬೇಕಾದ ಜವಾಬ್ದಾರಿಯನ್ನು ಸೇವಾಸಂಸ್ಥೆಗಳು ಹೊತ್ತುಕೊಂಡು ನಿರ್ವಹಿಸುರುದನ್ನು ಕಣ್ಣಾರೆ ಕಾಣಬೇಕು. ಏಳು ಸಾವಿರ ವಿದ್ಯಾರ್ಥಿಗಳು ಸಮವಸ್ತ್ರಧಾರಿಗಳಾಗಿ, ಯಾವುದೇ ಭಿನ್ನ ಭಾವನೆಯಿಲ್ಲದೆ, ಒಂದು ಕಡೆ ಕುಳಿತು ಸಂಜೆ-ಮುಂಜಾನೆಗಳಲ್ಲಿ ಮಾಡುವ ಪ್ರಾರ್ಥನಾ ದೃಶ್ಯವನ್ನು ನೋಡಿ ಕಣ್ಣಿಗೆ ಆನಂದವನ್ನು ತುಂಬಿಕೊಳ್ಳಬೇಕು. ಸಂಕ್ಷಿಪ್ತ ಕರ್ನಾಟಕವನ್ನು ಕಾಣುವ ಬಾಹ್ಯವನ್ನು ತಮ್ಮದಾಗಿಸಿಕೊಳ್ಳಬೇಕು. ಹದಿನಾಲ್ಕು ಸಾವಿರ ಕಣ್ಣುಗಳಲ್ಲಿ ಹೊಮ್ಮುವ ಬೆಳಕಿನಲ್ಲಿ ತಮ್ಮ ಅಂತರಂಗದ ಅವಲೋಕನ ಮಾಡಿಕೊಳ್ಳಬೇಕು. ಹದಿನಾಲ್ಕು ಸಾವಿರ ಪುಣ್ಯಪುರುಷರ ದರ್ಶನದಿಂದ ಹೊಸ ದೃಷ್ಟಿಯನ್ನು ಪಡೆಯಬೇಕು. ಇದೆಲ್ಲದಕ್ಕೆ ಕಾರಣರಾದ ಶಕ್ತಿಯನ್ನರಿಯುವವರಾಗಬೇಕು. ರಾಷ್ಟ್ರನಿರ್ಮಾಣ ಎಲ್ಲಿ ನಡೆಯುತ್ತಿದೆ ಎಂಬುದನ್ನು ಮನಗಾಣಬೇಕು.

ನಮ್ಮ ಜನಪ್ರತಿನಿಧಿಗಳು ಸ್ವಯಂಪ್ರೇರಣೆಯಿಂದ ಶ್ರೀಮಠದ ಸೇವಾಕೈಂಕರ್ಯವನ್ನು ಕಾಣಬಯಸುವವರೆ? ಹಾಗಾಗಲಿ ಎಂದು 'ಸಿದ್ಧಗಂಗಾ' ಆಶಿಸುತ್ತದೆ.

- ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸದಮದವನಳಿಯೆಂದು ನಿಜದಿರಿವ ತಿಳಿಯೆಂದು
ಹದವರಿತು ಬೋಧಿಸಿದ ನಿಜಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಷ್ಠೆಯ ನಿಜರೂಪ ಸತ್ಯದ ಶಿವರೂಪ
ಇಷ್ಟಲಿಂಗದ ಪ್ರತಿರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿನ ಅರವಟಿಗೆ ಮನದ ಮಂಗಳಧಾಮ
ಭಾವಸದ್ಭಾವದ ದೇಗುಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಾಲಯ ಜಂಗಮವೆ ಆತ್ಮಸಂಗಮ ಗುರುವೆ
ಸಂದು ಸಂಶಯವಳಿದ ಪರಶಿವವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೇದದ ಮೂಲವು ನೀನೆ ಶಾಸ್ತ್ರದ ಅಂತ್ಯವು ನೀನೆ
ಆಗಮ ಪುರಾಣಗಳ ತಿರುಳು ನೀನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಜಲಿಂಗ ಭಾಸ್ಕರನೆ ಚಂದ್ರತಾರಾಪತಿಯೆ
ಭಕ್ತ ಬಾನಂಗಳದ ಶಿವಬೆಳಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚಿತ್ಸೂರ್ಯ ಚಿನ್ಮಯನೆ ಬೆಳಗಿನೊಳಗಣ ಬೆಳಗೆ
ಸತ್ಯ ಸೌಂದರ್ಯ ಜ್ಯೋತಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಾಂತಿಸಾಗರಲಿಂಗ ಜ್ಞಾನಭಾಸ್ಕರಲಿಂಗ
ಪರಮ ಶಿವಲಿಂಗ ಗುರುಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಾಮರಸ್ಯವ ಬಿತ್ತಿ ಬೆಳೆದಿಹ ಗುರುಲಿಂಗ
ಸಂಗ ಮಹಾಲಿಂಗ ಜಯಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರದ ಅಚ್ಚರಿಯೆ ದಾಸೋಹದ ನಿಬ್ಬೆರಗೆ
ಮಾನವೀಯತೆಯ ಶ್ರೀ ಮಹವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ



## ಶ್ರೀವಾಣಿ

# ಮನಸ್ಸಾಕ್ಷಿ

ಚಾಣಕ್ಯ ಭರತವರ್ಷ ಕಂಡ ಅಸಾಧಾರಣ ಬೌದ್ಧಿಕ ಚಕ್ರವರ್ತಿ, ಆಡಳಿತ ದಕ್ಷ ನಕ್ಷತ್ರ, ರಾಜಕೀಯ ಮುತ್ಸದ್ದಿ, ಮಂತ್ರಿಶ್ರೇಷ್ಠ. ರಾಜನಿರ್ಮಾತೃ. ಚಂದ್ರಗುಪ್ತ ಸಾರ್ವಭೌಮ ಭಾಸ್ಕರ. ಪ್ರಾಮಾಣಿಕತೆಯ ಪ್ರತಿರೂಪ. ಸರಳ ಜೀವನ ಉನ್ನತ ಚಿಂತನಕ್ಕೆ ಹೆಸರಾದ ಪ್ರಜಾಪ್ರೇಮಿ. ಕರ್ತವ್ಯ ಪಾರಾಯಣ. ಸೇವೆಯೇ ಜೀವನ ಧ್ಯೇಯವಾಗಿಸಿಕೊಂಡ ಅಪರೂಪದ ವ್ಯಕ್ತಿತ್ವ ಅವನದು. ವಿಷ್ಣುಗುಪ್ತ, ಕೌಟಿಲ್ಯನೆಂದೂ ಪ್ರಸಿದ್ಧನಾದವನು.

ಒಮ್ಮೆ ಚಾಣಕ್ಯನನ್ನು ಕಾಣಲೆಂದ ಪರರಾಜ್ಯದ ವರಿಷ್ಠರು ಬಂದರು. ರಾತ್ರಿ ಬಹಳ ಸಮಯವಾಗಿತ್ತು. ಒಂದು ಸಾಮಾನ್ಯ ಕುಟೀರದಲ್ಲಿ ಚಾಣಕ್ಯ ಕರ್ತವ್ಯನಿರತನಾಗಿದ್ದ. ರಾಜಕಾರ್ಯದಲ್ಲಿ ಮಗ್ನನಾಗಿದ್ದ. ಬಂದ ವರಿಷ್ಠರು ಕೆಲವು ನಿಮಿಷ ನಿರೀಕ್ಷೆ ಮಾಡಿದರು. ಚಾಣಕ್ಯ ತಲ್ಲೀನತೆಯಿಂದ ಹೊರಬಂದ. ಉರಿಯುತ್ತಿದ್ದ ದೀಪ ಆರಿಸಿದ. ಮತ್ತೊಂದು ದೀಪ ಹೊತ್ತಿಸಿದ. ಕೆಲಸ ಮುಂದುವರೆಸಿದ. ಬಂದವರು ನೋಡುತ್ತಲೇ ಇದ್ದರು. ಚಾಣಕ್ಯನ ದೃಷ್ಟಿ ಕೆಲಸದಲ್ಲಿತ್ತು. ಕೊನೆಗೊಮ್ಮೆ ತಲೆ ಎತ್ತಿ ಬಂದವರ ಕಡೆ ನೋಡಿದ. ವರಿಷ್ಠರು ನಮಸ್ಕರಿಸಿ ನಿಂತರು. ಅವರಿಗೆ ಆತಿಥ್ಯ ಮಾಡಲಾಯಿತು. ಬಂದವರು ತಮ್ಮ ಸಮಸ್ಯೆಯನ್ನು ಚಾಣಕ್ಯನ ಮುಂದಿಟ್ಟರು. "ಯಾವುದೇ ಒಂದು ರಾಜ್ಯದ ಅಭಿವೃದ್ಧಿಗೆ ಮುಖ್ಯ ಕಾರಣ ಯಾವುದು" ಎಂದು ಕೇಳಿದರು. ಚಾಣಕ್ಯನ ಉತ್ತರ ನೇರವಾಗಿತ್ತು, "ಕರ್ತವ್ಯ ಶ್ರದ್ಧೆ, ವ್ಯಕ್ತಿಯ ಪ್ರಾಮಾಣಿಕತೆ" ಎಂದು ಹೇಳಿದ. ಬಂದ ವರಿಷ್ಠರಿಗೆ ತೃಪ್ತಿಯಾಯಿತು. ಮತ್ತು ಕೇಳಿದರು, "ಮಹಾನುಭಾವರೆ, ನಾವು ಬಂದಾಗ ನೀವು ಒಂದು ದೀಪದ ಬೆಳಕಿನಲ್ಲಿ ಕೆಲಸ ಮಾಡುತ್ತಿದ್ದಿರಿ. ಕೊಂಚ ಸಮಯದ ನಂತರ ಅದನ್ನು ಆರಿಸಿದಿರಿ, ಬೇರೊಂದು ದೀಪ ಹೊತ್ತಿಸಿಕೊಂಡು ಕೆಲಸ ಮುಂದುವರೆಸಿದಿರಿ. ನಮಗೆ ಇದರರ್ಥ ಗೊತ್ತಾಗಲಿಲ್ಲ. ದಯವಿಟ್ಟು ತಿಳಿಸಿರಿ" ಎಂದರು. ಚಾಣಕ್ಯ ನಿರುಮ್ಮಳತೆಯಿಂದ ಹೇಳಿದ, "ನೋಡಿ, ನಾನು ಕೆಲಸ ಮಾಡುವಾಗ ಎರಡು ದೀಪ ಇಟ್ಟುಕೊಂಡಿರುತ್ತೇನೆ. ಒಂದು ರಾಜಕಾರ್ಯಕ್ಕೆ ಅಂದರೆ ದೇಶದ ಕೆಲಸಕ್ಕೆ ಮತ್ತೊಂದು ನನ್ನ ವೈಯಕ್ತಿಕ ಖಾಸಗಿ ಕೆಲಸಕ್ಕೆ" ಎಂದು ಸ್ಪಷ್ಟಪಡಿಸಿದ. ಸ್ವಾರ್ಥಕ್ಕೆ ದೇಶವನ್ನೇ ಕಬಳಿಸುತ್ತಿರುವ ಇಂದಿನ ರಾಜಕಾರಣಿಗಳಿಗೆ ಇಂಥದೆಲ್ಲಿ ಅರ್ಥವಾಗಬೇಕು. ಸಾರ್ವಜನಿಕ ಸಂಪತ್ತನ್ನು ತಮ್ಮ ಭೋಗವೈಭವಕ್ಕೆ ಉಪಯೋಗಿಸುವ ಮಂದಿಯೇ ಇಂದು ಸೇವೆಯ, ಪ್ರಾಮಾಣಿಕತೆಯ ಮಾತನಾಡುತ್ತಿರುವುದು ಎಂಥ ದುರಂತ! ಬಸವಣ್ಣ, ಗಾಂಧೀಜಿ, ಲಾಲ್ ಬಹಾದ್ದೂರ್ ಶಾಸ್ತ್ರಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನಂಥವರನ್ನು ನಮ್ಮ ಜನ ಪ್ರಾಮಾಣಿಕರೆಂದು ಇಂದೂ ಸ್ಮರಿಸಿ ದೀಪ ಹಚ್ಚುತ್ತಾರೆ. ಪ್ರಾಮಾಣಿಕತೆ ನುಡಿಯಲ್ಲಿ ಕಂಡುಬಂದರೆ ಸಾಲದು, ನಡೆಯಲ್ಲಿ ಅಳವಡಬೇಕು. ಅದಕ್ಕೆ ಮನಸ್ಸಾಕ್ಷಿಬೇಕು.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಕನಸಿನಲಿ ಬಂದು ನೆರೆವ ಸ್ತ್ರೀಯರು
ಮನಸಿನ ಮಾಯೆ ಕಾಣಿಭೋ
ಮನಸಿನಲ್ಲಿ ಮಹವ ನಿಲಿಸಲು
ಕನಸಿನಲಿ ಬಂದು ನೆರೆವ ಸ್ತ್ರೀಯರು ಮನಸಿನಲ್ಲಿಲ್ಲ ನೋಡಾ.
ಮನವಳಿದಾತನೆ ಮಹದೇವನು ತಾನೆ ನೋಡಾ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ !

ಕನಸಿನಲ್ಲಿ ಬಂದು ಕೂಡುವ ಸ್ತ್ರೀಯರೆಲ್ಲರೂ ಮನಸಿನ ಮಾಯೆಯೇ ಆಗಿರುವರು. ಮನವು ಮಾಯೆಯಿಂದ ಕೂಡಿಕೊಂಡಿರುವತನಕ ಇಂತಹ ಕನಸಿನ ರಾಣಿಯರ ಸಂಗವು ತಪ್ಪುವುದಿಲ್ಲ. ಮನಸ್ಸಿನಲ್ಲಿ ಶಿವನನ್ನು ನೆಲೆಗೊಳಿಸಿಬಿಟ್ಟಾಗ ಮಾತ್ರ ಇವರೆಲ್ಲರ ಕಾಟ ತಪ್ಪಿಹೋಗುವುದು. ಮನವೇ ಸಂಸಾರ ವೆಂಬುದನ್ನು ಅನುಭವಿಗಳು ಅರಿತಿದ್ದಾರೆ. ಮನವ ಅಳಿದವನೇ ಮಹಾದೇವನಾಗುವನು. ಈ ಮನಸ್ಸಿನ ಕಾಟವನ್ನು ತಪ್ಪಿಸಿಕೊಳ್ಳ ಲಿಕ್ಕೇನೇ ಇಡೀ ಯೋಗಶಾಸ್ತ್ರದ ಪ್ರಕ್ರಿಯೆಯು ಹೊರಬಿದ್ದಿದೆ. "ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ" ಎಂಬ ಉಕ್ತಿಯು ಇಲ್ಲಿ ಸ್ಮರಣೀಯವಾಗಿರುವುದು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ -
ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಬಾಳಬುತ್ತಿ

ನಾನು ಹನ್ನೆರಡು ವರ್ಷದವನಾಗಿದ್ದಾಗ
ಅನಾಥನಾಗಿ ಸಿದ್ಧಗಂಗೆ ಮಠ ಸೇರಿದೆ.
ಮಾರನೇ ವರ್ಷ
ಲೋವರ್ ಸೆಕೆಂಡರೀ ಪರೀಕ್ಷೆಗೆ
ಓದುತ್ತಿದ್ದಂತೆಯೇ

ಅಜ್ಞಾನೋದಯವಾಗಿ
ಈ ಓದೆಲ್ಲಾ ಹೊಟ್ಟೆ ಪಾಡಿಗಾಗಿ
ನನಗೆ ಮೋಕ್ಷ ಬೇಕೆಂದು
ಗುರುವನ್ನು ಬಿಟ್ಟು
ಗುರುವನ್ನು ಹುಡುಕಿಕೊಂಡು
ದೇಶಾಂತರ ಹೊರಟೆ.

ಹಲವು ಕೆರೆಯ ನೀರು ಕುಡಿದು
ಹೊಟ್ಟೆಯಲ್ಲಿ ಕೊಕ್ಕೇ ಹುಳುವಾಗಿ
ಮೈಯೆಲ್ಲ ಬಾಯಲು
(ಆರು ತಿಂಗಳಾದ ಮೇಲೆ)
ಮಠಕ್ಕೆ ಮರಳಿ ಬಂದೆ
ಶ್ರೀ ಶಿವಕುಮಾರ ಸ್ವಾಮೀಜಿಗೆ
ನಮಸ್ಕರಿಸಿದಾಗ
ಅವರು ನಸುನಗುತ್ತ
ಊಟ ಮಾಡು ಹೋಗು ಎಂದರು.

ಎಂಥ ಅಪರಾಧಿಗೆ
ಏನು ಪ್ರೀತಿ ತೋರಿದರು.
ಸಿದ್ಧಗಂಗೆಯಲಿ ಸಿಕ್ಕವುದು
ಬರೀ ಊಟವಲ್ಲ
ಅದು ಬಾಳಬುತ್ತಿ.

ಡಾ|| ಎಲ್. ಬಸವರಾಜು







# ದುಡಿಮೆಯೇ ಧರ್ಮ

- ಗೊ.ರು. ಚನ್ನಬಸಪ್ಪ,
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು-೮೨

'ಏನಾಗಿದೆ, ಏನಾಗಿದೆ ಈ ಜನಕೆ?' - ಕವಿ ಹಿ.ಮ.ನಾ. ಅವರ ಒಂದು ಕವನದ ಮೊದಲ ಸಾಲಿದು. ಇಂದು ನಮ್ಮ ಸುತ್ತ ಮುತ್ತ ನಡೆಯುತ್ತಿರುವ ವಿದ್ಯಮಾನಗಳನ್ನು ಕಂಡಾಗ ಕವಿಯ ಈ ಪ್ರಶ್ನೆ ಎಷ್ಟು ಸೂಕ್ತ ಮತ್ತು ಸಹಜ ಎಂದೆನಿಸದಿರದು. ದಿನ ದಿನಕ್ಕೆ ತಿಳಿವಳಿಕೆಯ ಎತ್ತರಕ್ಕೆ ಏರಬೇಕಾದ ಮಾನವ ವಾಸ್ತವವಾಗಿ ಮೂರ್ಖತನದ ಕಮರಿಗೆ ಬೀಳುತ್ತಿದ್ದಾನೆ.

ಇದಕ್ಕೆ ಕಾರಣವೇನು? ಕೇವಲ ವ್ಯಕ್ತಿಪ್ರತಿಷ್ಠೆ, ದುರಹಂಕಾರ, ಧರ್ಮಾಂಧತೆ ಮತ್ತು ಭಾಷಾ ದುರಭಿಮಾನ. ಹಾಗೆಯೇ, ಇನ್ನೊಂದು ಕಡೆ ವ್ಯಕ್ತಿಯ ದೌರ್ಬಲ್ಯ, ಅತಿ ವಿನಯ, ಧರ್ಮದ್ವೇಷ ಮತ್ತು ಭಾಷಾ ನಿರಭಿಮಾನ, ಇವೆರಡು ರೀತಿ ಅವಲಕ್ಷಣಗಳು ಸುಳಿದೆಗೆದು ಬೆಳೆಯುವುದೇ ಸೋಮಾರಿಗಳಲ್ಲಿ. ಬೆವರು ಹರಿಸಲಾಗದ ಮೈಗಳ್ಳರಲ್ಲಿ. ಈ ಎರಡೂ ವರ್ಗದ ಜನರು ಸಮಾಜವನ್ನು ಅಶಾಂತಿಯ ಪ್ರಪಾತಕ್ಕೆ ತಳ್ಳುತ್ತಿದ್ದಾರೆ.

ಏಕೆ ಹೀಗೆ? ನಮ್ಮ ಜನರ ವಿಚಾರಶಕ್ತಿ ಹಾಳಾಗಿ ಹೋಗಿದೆಯೆ? ನಾವು ಪರಸ್ಪರ ಪ್ರೀತಿ-ವಿಶ್ವಾಸಗಳಿಂದ ಬಾಳಲು ಸಾಧ್ಯವಿಲ್ಲವೆ? ಪರಸ್ಪರ ಗೌರವದ ವಿನಿಮಯಕ್ಕೆ ಅವಕಾಶ ವಿಲ್ಲವೆ?

ತೀರ ವಿಚಿತ್ರವೆಂದರೆ, ಮಾನವ ಜೀವನಕ್ಕೆ ಸಂಸ್ಕಾರ ನೀಡಬೇಕಾದ ಸಾಹಿತ್ಯ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಪರಸ್ಪರ ಹೊಂದಾಣಿಕೆಯಿಲ್ಲದ ಅಂಧತ್ವವಿರುವುದು. ಹೀಗಾದರೆ ಯಾರಿಗೆ ಹೇಳುವುದು? ಅದಕ್ಕೇ ಕವಿ ಕೇಳುವುದು 'ಏನಾಗಿದೆ, ಏನಾಗಿದೆ ಈ ಜನಕ್ಕೆ?' ಎಂದು.

ಇಂದು ಧರ್ಮದ ಹೆಸರಿನಲ್ಲಿ, ಸಿದ್ಧಾಂತದ ಹೆಸರಿನಲ್ಲಿ ದ್ವೇಷದ ದಳ್ಳುರಿ ಎಬ್ಬಿಸಿ ದೇಶವನ್ನು ಹಾಳು ಮಾಡುವ ಶಕ್ತಿಗಳು ಹೆಚ್ಚಾಗುತ್ತಿವೆ. ಈ ಬಗ್ಗೆ ಎಚ್ಚರ ಅಗತ್ಯ.

ಇಂದಿನ ಸಂದರ್ಭದಲ್ಲಿ ಅತ್ಯಂತ ಅವಸರದ ಅಗತ್ಯ ವೆಂದರೆ ದುಡಿಯುವವರ ಪೂರ್ಣ ಸಂಘಟನೆ; ಅಂತಹ ಸಂಘಟನೆಯಿಂದ ಮಾತ್ರ ಸೋಮಾರಿಗಳು ಒಡ್ಡುವ ಸವಾಲನ್ನು ಎದುರಿಸಲು ಸಾಧ್ಯ.

ಕರ್ಮಾಚರಣೆಗಳೇ ಧರ್ಮವಲ್ಲ; ದುಡಿಮೆಯೇ ಧರ್ಮ. ಆರು ಜನ ದುಡಿದು ಮೂರು ಜನ ತಿನ್ನುವುದು ತಪ್ಪಬೇಕು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಅನ್ನವನ್ನು ತಾನು ಬೆವರುಹರಿಸಿ ಗಳಿಸಬೇಕು. ಗಳಿಸಿದುದನ್ನು ಬಳಸಿ, ಉಳಿದುದನ್ನು ಅಸಹಾಯಕ ರಿಗೆ, ಅಂಗವಿಕಲರಿಗೆ ಹಂಚಬೇಕು. ಅದು ದುಡಿಮೆಯ ಧರ್ಮ.

ಎಲ್ಲರೂ ದುಡಿಮೆಯಲ್ಲಿ ತೊಡಗಿದರೆ ಉಳಿದ ಚೇಷ್ಟೆಗಳಿಗೆ ಅವಕಾಶವಿರುವುದಿಲ್ಲ. ದುಡಿಯದ ಸೋಮಾರಿ ಗಳಿಂದಲೇ ಅನಾಹುತದ ಕೃತಿಗಳು ನಡೆಯುವುದು. ಭಾರತ ದಂತಹ ನಿಸರ್ಗ ಸಂಪತ್ತಿನ ದೇಶ ಇನ್ನೂ ಬಡತನ ಅನುಭವಿ ಸುತ್ತಿದೆ ಎಂದರೆ ಅದಕ್ಕೆ ಕಾರಣ ಸೋಮಾರಿಗಳ ಸಂಖ್ಯೆ ಹೆಚ್ಚಿರುವುದು. ನಮ್ಮ ದೇಶದಲ್ಲಿ ಎಲ್ಲವೂ ಇದೆ. ಆದರೆ ಬೇಕಾಗಿರುವ ದುಡಿಮೆಯ ಧರ್ಮವಿಲ್ಲ. ಈ ಧರ್ಮ ಆಚರಣೆಗೆ ಬರದಿದ್ದರೆ ಈ ದೇಶಕ್ಕೆ ನೆಮ್ಮದಿಯಿಲ್ಲ.

ಸತ್ಯಶುದ್ಧ ಕಾಯಕವ ಮಾಡಿ ತಂದು
ವಂಚನೆಯಿಲ್ಲದ ಪ್ರಪಂಚಳಿದು
ನಿಚ್ಚ ಜಂಗಮಕ್ಕೆ ದಾಸೋಹವ ಮಾಡುವ
ಸದ್ಭಕ್ತನ ಹೃದಯದೊಳಗೆ ಅಚ್ಚೊತ್ತಿದಂತಿಪ್ಪ
ಕಾಮಧೂಮ ಧೂಳೇಶ್ವರ .
- ಮಾದಾರ ಧೂಳಯ್ಯ

ಕಾಯವಿದ್ದಲ್ಲದೆ ಜೀವಕ್ಕೆ ನೆಲೆಯಿಲ್ಲ, ಜೀವವಿದ್ದಲ್ಲದೆ ಜ್ಞಾನಕ್ಕೆ
ಕುರುಹಿಲ್ಲ; ಜ್ಞಾನವಿದ್ದಲ್ಲದೆ ಬೆಳಗಿಗೆ ಒಡಲಿಲ್ಲ
ಒಂದಕ್ಕೊಂದ ಹಿಂಗಿ ಕಾಂಬ ಠಾವ ಹೇಳಾ
ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗವೇ
- ಶಿವಲೆಂಕ ಮಂಚಣ್ಣ

ಭಾಗ-೨

# ವೀರಶೈವ ಸಾಹಿತ್ಯದಲ್ಲಿ ಜೀವನದರ್ಶನ

- ಪ್ರೊ. ಸ.ಸ. ಮಾಳವಾಡ

ಉಳ್ಳವರು ಶಿವಾಲಯವ ಮಾಡಿದರು
ನಾನೇನ ಮಾಡುವೆನಯ್ಯಾ ಬಡವನು
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರವೋ ಹೊನ್ನಕಲಶವಯ್ಯಾ
ಕೂಡಲಸಂಗಮದೇವ ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ.

ಸ್ಥಾವರಶಿವಾಲಯ ಒಂದಿಲ್ಲೊಂದು ದಿನ ಅಳಿಯು ವುದು. ಆದರೆ ಜಂಗಮಕ್ಕೆ ಅಂದರೆ ಶಿವೋಹಂ ಭಾವದ ಸರ್ವವ್ಯಾಪಿಯಾದ ಚೈತನ್ಯಕ್ಕೆ ಅಳಿವು ಇರಲಾರದು. ಸಂಪತ್ತು ಉಳ್ಳವರು ಶಿವಾಲಯ ಕಟ್ಟಿಸಬಹುದು. ಆದರೆ ಭಕ್ತಿಸಂಪತ್ತಿನಿಂದ ಕೂಡಿದವರಿಗೆ ದೇಹವೇ ದೇವಾಲಯ, ಪ್ರಾಣಲಿಂಗವೇ ದೇವರು.

ಮಾನವಜೀವನದಲ್ಲಿ ಅರೆ-ಕೊರೆಗಳಿವೆ; ಕಷ್ಟಕಾರ್ಪಣ್ಯಗಳು ಬಂದೇ ಬರುತ್ತವೆ. ಅವುಗಳನ್ನು ಧೀರತನದಿಂದ ಎದುರಿಸುವ ನಿಲುಮೆ ಶರಣರ ವಚನಗಳಲ್ಲಿದೆ;

ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು
ಜೀವನೋಪಾಯಕ್ಕಂಜಿ 'ಈಯಯ್ಯಾ' ಎನ್ನೆನು
ಉರಿ ಬರಲಿ, ಸಿರಿ ಬರಲಿ ಬೇಕುಬೇಡೆನ್ನೆನು
ಆನು ನಿಮ್ಮ ಹಾರೆನು ಮಾನವರ ಬೇಡೆನು

ಐಹಿಕ-ಬಾಳಿನ ಅವಶ್ಯಕತೆಗಳನ್ನು ಪೂರೈಸಬೇಕೆಂದು ದೇವರನ್ನೂ ಬೇಡಲಾರೆನೆನ್ನುವ ನಿಲುಮೆ ಬಸವಣ್ಣನವರದಾಗಿದೆ. ಮಾನವರನ್ನು ಬೇಡುವುದಂತೂ, ವೀರಶೈವ ಸಂಸ್ಕೃತಿಗೇ ವಿರೋಧವಾದುದು. 'ಕಾಯಯ್ಯಾ', 'ಈಯಯ್ಯಾ' ಎಂಬ ದೈನ್ಯವು ಆತ್ಮಗೌರವಕ್ಕೆ ಬಾಧಕವಾದುದು. ಆತ್ಮಗೌರವ ದಿಂದ ಬಾಳುವ ನಿಲುಮೆಯನ್ನು ಹರಿಹರದೇವನು ತನ್ನ ಶತಕ ಸಾಹಿತ್ಯದಲ್ಲಿ ಸ್ಪಷ್ಟಪಡಿಸಿದ್ದಾನೆ. ಆತ್ಮಗೌರವಕ್ಕೆ ಹಾನಿಯೊದಗುವಂತೆ ದೈನ್ಯದಿಂದ ಬಾಳುವವರು ವೀರಶೈವದ ತಿರುಳನ್ನೇ ಅರಿತಿಲ್ಲವೆಂದು ಹೇಳಬೇಕಾಗುತ್ತದೆ.

ಅಂಜಿದರಾಗದು ಅಳುಕಿದರಾಗದು
ವಜ್ರಪಂಜರದೊಳಗಿದ್ದರಾಗದು ತಪ್ಪದೆಲವೋ ಲಲಾಟಲಿಖಿತ
ಕಕ್ಕುಲತೆ ಬಿಟ್ಟರೆ ಆಗದು ಬಪ್ಪುದು ತಪ್ಪದು
ನಾಳೆ ಬಪ್ಪುದು ನಮಗಿಂದೇ ಬರಲಿ
ಇಂದು ಬಪ್ಪುದು ನಮಗೀಗಲೇ ಬರಲಿ
ಇದಕಾರಂಜುವರು ಇದಕಾರಳಕುವರು?

ಇಂತಹ ಧೀರನಿಲುಮೆ ಬಸವಣ್ಣನದು. ಈ ಬಗೆಯ ಧೀರತನವಿಲ್ಲದವರು ನಿಜವಾದ ವೀರಶೈವರಾಗಲಾರರು. ಬಂದುದನು ಶಿವಪ್ರಸಾದವೆಂದು ಸ್ವೀಕರಿಸಿ ಮಾನವರ ಹಂಗಿಲ್ಲದಂತೆ ಬಾಳುವುದೇ ವೀರಶೈವದ ನಿಲುಮೆ,

ನಿಶ್ಚಿಂತನಾದವನಿಗೆ ಮತ್ತಾರ ಹಂಗುಂಟು?
..........................
ತಾನು ತಾನಾದವಂಗೆ ಮಾನವರ ಹಂಗುಂಟೇ?
ಭಾವ ಬಯಲಾದವಂಗೆ ಬಯಕೆ ಎಂಬುದುಂಟೇ?
ಗೊತ್ತ ಕಂಡವಂಗೆ ಅತ್ತಿತ್ತ ಅರಸಲುಂಟೇ?
ಇಂತು ನಿಶ್ಚಿಂತರಾಗಿ, ನಿಜವ ನಂಬಿದ ಶರಣರ
ಎನಗೊಮ್ಮೆ ತೋರಿಸಯ್ಯ ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ

ಹೀಗೆ ನಿಶ್ಚಿತವಾದ ಜೀವನ ಶರಣರದು,

ಅಂಗದ ಕಳವಳ, ಮನದ ಸಂಚಲ, ಭಾವದ ಭ್ರಾಂತು
.........................................
ಸ್ಥಾನಮಾನವೆಂಬ ಲಕ್ಷ.............ಇಂದ್ರಿಯಂಗಳ ಇಚ್ಛೆ
.......................
ಅಷ್ಟಮದಂಗಳ ಘಟ್ಟಿ, ಷಡೂರ್ಮಿಗಳ ವಿಕಾರ-
ಇಂತಪ್ಪ ಸಕಲಪ್ರಪಂಚನೊಳು ಸಿಲುಕದ
ಅಕಳಂಕರಪ್ಪ.............ಸಮತೆಸಮಾಧಾನಸಹಜಾನಂದ
ಯೋಗದೊಳಿಪ್ಪ ಮಹಾಶರಣರ ತೋರಿ ಬದುಕಿಸು ಎನ್ನ
ಸೌರಾಷ್ಟ್ರ ಸೋಮೇಶ್ವರಾ, ನಿಮ್ಮ ಧರ್ಮ ನಿಮ್ಮ ಧರ್ಮ

ನಿಸ್ಪೃಹತೆಯಿಂದ ಕೂಡಿದ ನಿಶ್ಚಿಂತ ಜೀವನ, ಸಮತೆ, ಸಮಾಧಾನ, ಸಹಜಾನಂದಯೋಗದೊಳು ಬಾಳುವುದು ಇದು ಶರಣರ ಜೀವನದರ್ಶನ;

ಆರೇನೆಂದರೂ ಓರಂತಿರ್ಪುದೇ ಸಮತೆ
ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯಾ,
ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯಾ,
ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ,
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ
ಸಮಾಧಾನಿಯಾಗಿರಬೇಕು

ಬಾಳಿನಲ್ಲಿ ಬರುವ ಸ್ತುತಿಯಿಂದ ಹಿಗ್ಗಬಾರದು, ನಿಂದೆಯಿಂದ ಕುಗ್ಗಬಾರದು. ಲೋಕದಲ್ಲಿ ಹುಟ್ಟಿದ ಬಳಿಕ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು, ಸಮಾಧಾನವು ಸಹಜಾನಂದಯೋಗದತ್ತ ಸಾಗಬೇಕು.





ಕೋಪತಾಳುವ ಸನ್ನಿವೇಶಗಳು ಬಾಳಿನಲ್ಲಿ ಬರುತ್ತಿರುವುದೂ ನಿಜ. ಆದರೆ ಕೋಪತಾಳುವುದು ಹಿತಕಾರಿಯಲ್ಲ. ಇತರರು ನಮಗೆ ಮುನಿದಾಗಲೂ ನಾವು ಮುನಿಯಬಾರದು.

ತನಗೆ ಮುನಿದವರಿಗೆ ತಾ, ಮುನಿಯಲೇಕಯ್ಯಾ?
ತನಗಾದ ಆಗೇನು? ಅವರಿಗಾದ ಚೇಗೇನು?
ತನುವಿನ ಕೋಪ ತನ್ನ ಹಿರಿಯತನದ ಕೇಡು?
ಮನದ ಕೋಪ ತನ್ನರುಹಿನ ಕೇಡು
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು, ಕೂಡಲಸಂಗಮದೇವಾ

ಕೋಪವೆಂಬುದು ಕಿಚ್ಚು ಇದ್ದಂತೆ. ಆ ಕಿಚ್ಚು ಕೋಪತಾಳಿದವರನ್ನೇ ಮೊದಲು ಸುಡುವುದು. ಕೋಪತಾಳುವುದು ನಮ್ಮ ಹಿರಿಯತನದ ಅರಿವಿನ ಕೇಡೂ ಅಹುದು.

ಭಕ್ತನು ಶಾಂತನಾಗಿರಬೇಕು
ತನ್ನ ಕುರಿತು ಬಂದ ಟಾವಿನಲ್ಲಿ ಸತ್ಯನಾಗಿರಬೇಕು
ಭೂತಹಿತವಚನವ ನುಡಿಯಬೇಕು
.............................................
ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು
.............................................
ಸಕಲ ಇಂದ್ರಿಯಗಳೂ ತನ್ನ ವಶಗತವಾಗಿರಬೇಕು

ಸಕಲ ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ಶಾಂತಿ ಸಮಾಧಾನಗಳಿಂದ ಬಾಳುವ ಭಕ್ತನಿಗೆ ಯಾವ ಪದವಿಗಳೂ ಬೇಕೆನಿಸುವುದಿಲ್ಲ.

ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ,
ಮತ್ತಾವ ಪದವಿಯನೊಲ್ಲೆನಯ್ಯಾ ಕೂಡಲಸಂಗಮದೇವಾ,
ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ,
ಸದ್ಭಕ್ತರ ಸಂಪರ್ಕವೇ ಮಹಾಪದವಿ

ಎಂದು ಶರಣ ಭಾವಿಸುತ್ತಾನೆ. ಸ್ಥಾನಮಾನಪದವಿಗಳಿಗಾಗಿ ಹಾತೊರೆಯುವವರಿಗೆ ಶಾಂತಿಸಮಾಧಾನಗಳಿರುವುದಿಲ್ಲವೆಂಬುದೂ ಅನುಭವದ ಸಂಗತಿಯಾಗಿದೆ. ಒಳಗೆ ಶಾಂತಿಸಮಾಧಾನಗಳಿಲ್ಲದವರೇ ಹೊರಗಿನ ಸ್ಥಾನಮಾನಪದವಿಗಳಿಗಾಗಿ ಹಂಬಲಿಸುವುದುಂಟು. ಸಹಜಾನಂದದ ಶರಣನಿಗೆ ಅವು ಬೇಕಿಲ್ಲ, ಶರಣ ಹಂಬಲಿಸುವುದು ಶಿವಾನುಭಾವಕ್ಕಾಗಿ.

ಅರಿವು ಆಚಾರದಲ್ಲಿ ಪರಿಣಮಿಸಿ ಅದು ಅನುಭಾವದ ಗುರಿಯತ್ತ ಸಾಗುವ ಪಥವು ವೀರಶೈವರದಾಗಿದೆ. **"ವೀರಶೈವಾಚಾರ ಸಂಪನ್ನರೆನಿಸುವ ಪರಮಸದ್ಭಕ್ತರಿಗೆ ಅನುಭಾವವೇ ಅರಿವಿನ ಗೊತ್ತು".**

ಅಜ್ಞಾನಿ ಅರಿಯಲಾರ, ಅಲ್ಪಜ್ಞಾನಿ ಪ್ರಕೃತಿ ಸ್ವಭಾವಿ, ಮಧ್ಯಮಜ್ಞಾನಿ ವೇಷದಾರಿ. ಈ ಬಗೆಯ ಹಂತಗಳಲ್ಲಿರುವ ಜನರನ್ನು ಮಾನವರ ಬಾಳಿನಲ್ಲಿ ನಾವು ಸಾಮಾನ್ಯವಾಗಿ ಕಾಣುತ್ತೇವೆ. ಈ ಹಂತಗಳ ಮೇಲಿರುವವ ಅತೀತಜ್ಞಾನಿ, ಆರೂಢ, ಈ ಹಂತಕ್ಕೇರಿ ಬಾಳಿನಲ್ಲಿ ಬೆರೆಯುವುದು ವೀರಶೈವದರ್ಶನವಾಗಿದೆ.

ಭಾವದ ಭ್ರಮೆಗೆ, ತರ್ಕದ ಗೆಲ್ಲಸೋಲಕ್ಕೆ ಹಿಕ್ಕುಗೊಡದಿರ್ಪುದೇ ಅರಿವು. ಅದು ಅನ್ಯಭಾವದ ನೆನೆಯದೆ ತನ್ನೊಳಗೆ ತಾನು ಎಚ್ಚರವಾಗಿಪ್ಪ ನಿಲವು, ಒಳಗೆ ಎಚ್ಚರವಾಗಿ ಹೊರಗಿನ ಬಾಳಿನಲ್ಲಿ ಭಾಗಿಯಾಗಬೇಕೆಂಬುದು ವೀರಶೈವರ ಜೀವನದರ್ಶನ. ಈ ದರ್ಶನಕ್ಕನುಗುಣವಾಗಿ ಬಾಳಿದರು ಶರಣರು, ಅಂತಹ ಬಾಳಿನ ಅನುಭವದ ಅಭಿವ್ಯಕ್ತಿಯಾಗಿದೆ ಅವರ ಸಾಹಿತ್ಯ. ಆ ಸಾಹಿತ್ಯದ ಕೆಲವೊಂದು ಉಕ್ತಿಗಳನ್ನು ನಾವೀಗ ಗಮನಿಸಬೇಕು.

ಮನವು ಘನದಲ್ಲಿ ವೇದ್ಯವಾದ ಬಳಿಕ
ಪುಣ್ಯವಿಲ್ಲ, ಪಾಪವಿಲ್ಲ, ಸುಖವಿಲ್ಲ, ದುಃಖವಿಲ್ಲ
ಕಾಲವಿಲ್ಲ, ಕರ್ಮವಿಲ್ಲ, ಜನನವಿಲ್ಲ, ಮರಣವಿಲ್ಲ

ಇಂತಹ ನಿಲವಿನಲ್ಲಿರುವ ಶರಣ ಘನಮಹಿಮ, ಆತನು ನಿಜವರಿದ ನಿಶ್ಚಿಂತ, ಮರಣವ ಗೆಲಿದ ಮಹಂತ, ಪರವನೊಳಕೊಂಡ ಪರಿಣಾಮಿ, ಬಯಲ ಒದಗಿದ ಭರಿತ.

ಆತ ಇರ್ದು ಬದ್ಧನಲ್ಲ, ಸುಳಿದು ಸೂತಕಿಯಲ್ಲ,
ಆವ ಸಂಗವೂ ಇಲ್ಲದ ನಿಜೈಕ್ಯನು,
ಬೇಕು ಬೇಡೆನ್ನದೆ ಅಳಿದು ಉಳಿದು
ಕರ್ಪೂರದ ಗಿರಿಯನ್ನು ಉರಿ ತಾಗಿದಂತೆ
ಕೂಡಲಚೆನ್ನಸಂಗಯ್ಯನಲ್ಲಿ ನಿಜೈಕ್ಯನು

ಅಂಗಲಿಂಗದಲ್ಲಿ ತರಹರವಾಗಿ
ಮನ ಜ್ಞಾನದಲ್ಲಿ ತರಹರವಾಗಿ
ಭಾವ ನಿರ್ಭಾವದಲ್ಲಿ ತರಹರವಾಗಿ
ಸಮತೆ ಶಾಂತಿಯಲ್ಲಿ ತರಹರವಾಗಿ
..........................

ಅಚ್ಚ ಶರಣನಾಗಿ ಬಾಳುತ್ತಾನೆ

ವೇದ ಶಾಸ್ತ್ರ ಆಗಮ ಪುರಾಣವ್ಯಾಕರಣ ಇತಿಹಾಸಂಗಳ
ಓದಿ ಕೇಳಿ ಹೇಳುವಾತ ಜಾಣನೇ? ಅಲ್ಲಲ್ಲ
ಜಾತಿಗೊಂದು ಮಾತ ಕಲಿತು ನೀತಿ ಹೇಳುವಾತ ಜಾಣನೇ? ಅಲ್ಲಲ್ಲ
ಮತ್ತಾರು ಜಾಣರೆಂದರೆ
ಮತ್ತಮತಿಯೆಂಬ ಕತ್ತಲೆಯ ಕಳೆದು
ತಥ್ಯ ಮಿಥ್ಯ ರಾಗದ್ವೇಷವನ್ನಳಿದು
ನಿತ್ಯಲಿಂಗದಲ್ಲಿ ಚಿತ್ತವಡಗಿರ್ಪ

ಚಿನ್ಮಯ ಶರಣನೇ ಜಾಣನಯ್ಯಾ ಅಖಂಡೇಶ್ವರಾ
ಆತ್ಮ ನಿಜವನರಿದು, ಪರಮಾತ್ಮಲಿಂಗ
ತಾನೆಂದರಿದ ಶರಣಂಗೆ ಎಂತಿರ್ದಂತೆ ಪೂಜೆ ನೋಡಾ
ಶರಣ ಭೋಗಿಸಿದುದೆಲ್ಲಾ ಶಿವಾರ್ಪಿತ
ರುಚಿಸಿದುದೆಲ್ಲಾ ಪ್ರಸಾದ
ಶರಣನರಿದುದೆಲ್ಲಾ ಪರಬ್ರಹ್ಮ
ಮರೆದುದೆಲ್ಲಾ ಪರಮಸುಖ
ನುಡಿದುದೆಲ್ಲಾ ಶಿವತತ್ವ
ಶರಣತಾನೆ ಕೂಡಲಚೆನ್ನಸಂಗಮದೇವ

ಅಹಂಕಾರವನೆ ಮರೆದು, ದೇಹಗುಣಂಗಳನೆ ಜರೆದು,
ಇಹಪರವೂ ತಾನೆಂದರಿದ ಕಾರಣ, ಸೋಹಂಭಾವ ಸ್ವಸ್ಥಿರವಾಯಿತ್ತು
ಸಹಜದುದಯದ ನಿಲವಿಂಗೆ
ಮಹಾಘನಲಿಂಗದ ಬೆಳಗು ಸ್ವಾಯತವಾದ ಕಾರಣ
ಗುಹೇಶ್ವರಾ ನಿಮ್ಮ ಶರಣನುಪಮಾತೀತನು

.................................................

ಘನಮಹಾಲಿಂಗಕ್ಕೆ ಮನವೆ ಪೀಠವಾಗಿ
ತನುವೆ ಶಿವಾಲಯವಾಗಿ, ಧ್ಯಾನವೇ ತೃಪ್ತಿಯಾಗಿ
ಅಂಬುಧಿಯೊಳಗೆ ಮುಳುಗಿದ ಪೂರ್ಣಕುಂಭದಂತೆ
ನಿಮ್ಮ ಅವಿರಳ ದಿವ್ಯಮಹಾಬೆಳಗಿನೊಳು ಮುಳುಗಿ,
ನಾನು ನೀನೆಂಬುಭಯದ ಕುರುಹ ಮರೆದು

ಏನೇನೂ ಅರಿಯದಿರ್ದೆನಯ್ಯ ಅಖಂಡೇಶ್ವರಾ

ಭಕ್ತಿಗೆ ಭಂಡಾರವಾಗಿಪ್ಪ ಸಂಗನಬಸವಣ್ಣ
ಎನಗೆ ಹಾಗತೂಕ ಭಕ್ತಿಯ ಕೊಡಯ್ಯಾ
ಪ್ರಸಾದವೇ ಚಿತ್ಪಿಂಡಸ್ವರೂಪವಾಗಿಪ್ಪ ಚೆನ್ನಬಸವಣ್ಣ
ಎನಗೆ ಹಾಗತೂಕ ಜ್ಞಾನವ ಕೊಡಯ್ಯಾ
ಮಾಯಾಕೋಲಾಹಲನಪ್ಪ ಅಲ್ಲಮಪ್ರಭುವೇ
ಎನಗೆ ಹಾಗತೂಕ ವೈರಾಗ್ಯವ ಕೊಡಯ್ಯಾ

ಬೆಟ್ಟದ ಗುಂಡ ತಂದು ಇಷ್ಟಲಿಂಗದಲ್ಲಿ
ಐಕ್ಯವ ಮಾಡಿದ ಗಟ್ಟಿವಾಳಲಿಂಗವೇ
ಎನಗೆ ಹಾಗತೂಕ ಲಿಂಗವ ಕೊಡಯ್ಯಾ
ಇವು ನಾಲ್ಕು ಹಾಗ ಕೂಡಿದಲ್ಲಿಯೇ ಮನ
ಲಿಂಗದಲ್ಲಿ ಅಂದಣವಪ್ಪುದು

ಸಮಸ್ತ ಕತ್ತಲೆಯ ಮಸಕ ಕಳೆದಿಪ್ಪ ಇರವ ನೋಡಾ
ಬೆಳಗಿಂಗೆ ಬೆಳಕು ಸಿಂಹಾಸನವಾಗಿ,
ಬೆಳಗು ಬೆಳಗ ಕೂಡಿದ ಕೂಟವ
ಕೂಡಲಸಂಗಯ್ಯ ತಾನೇ ಬಲ್ಲ

ಒಟ್ಟಿನಲ್ಲಿ "ಅನಾಯಾಸದಿಂದ ಮನೆಯ ಮಾಡಿ, ನಿರಾಯಾಸದಿಂದ ಪರಮಸುಖಿ"ಯಾಗುವುದು ಶರಣರ ಜೀವನ ದರ್ಶನವಾಗಿದೆ.







# ಇಷ್ಟಲಿಂಗ ರಹಸ್ಯ

- ಪ್ರೊ. ಬಿ. ವಿರೂಪಾಕ್ಷಪ್ಪ

**ಅಚೇತನವನಪ್ಪ ಶಿಲಾಮಯಲಿಂಗವು,**
**ಸಚೇತನವಪ್ಪ ಭಕ್ತನ ಭವರೋಗವನೆಂತು ಕಳೆಯಬಲ್ಲುದು?**
**ಎಂಬ ಬರುಮಾತಿನ ಮಾನವರ ಮಾತ ಕೇಳಲಾಗದು**
**ಅದೇನು ಕಾರಣವೆಂದಡೆ,**
**ಮಿಸುನಿಯಿಂದುಂಟಾದ ಕಟಕ ಮಕುರಾಟಿ ತೊಡವುಗಳು**
**ಮಿಸುನಿಯಲ್ಲದೆ ಮತ್ತೊಂದು ರೂಪಾಗಬಲ್ಲುದೆ ಹೇಳಾ?**
**ಆತ್ಮನಿಂದಾದ ಆಕಾಶಾದಿ ಭೂತಪಂಚಕವು**
**ಆತ್ಮನೆ ಅಲ್ಲದೆ ಮತ್ತೊಂದು ರೂಪಾಗಬಲ್ಲುದೇ ಹೇಳಾ?**
**ಅದು ಕಾರಣ ಧರೆಯ ಕಠಿಣಾಂಗವಾದ ಶಿಲೆಯಲ್ಲೂ**
**ಶಿವಾಂಶವಿರ್ಪುದು ಸಹಜವಂದರಿತು**
**ಶ್ರೀಗುರು, ಶಾಸ್ತ್ರ ಸಮ್ಮತವಾದ ಶಿಲಾಮಯಲಿಂಗದಲ್ಲಿ**
**ವ್ಯಕ್ತವಾಗುವಂತೆ ಶಿವಕಲೆಯ ಪ್ರತಿಷ್ಠಿಸಿ,**
**ಇಷ್ಟಲಿಂಗವಾಗಿ ಮಾಡಿ ಶಿಷ್ಯನ ಕರಮಲಕ್ಕೆ ಕರುಣಿಸಿಕೊಟ್ಟು**
**ಆ ನಿರಾಕಾರವಪ್ಪ ಪರಬೊಮ್ಮವೆ ತಿಳಿದುಪ್ಪ ಬಿಳಿದುಪ್ಪವಾದಂತೆ**
**ಸಾಕಾರವಾಗಿ ನಿನ್ನ ಕರಕಮಲಕ್ಕೆ ಬಂದಿರ್ಪುದು.**
**'ಯದ್ಭಾವಸ್ತದ್ಭವತಿ' ಎಂಬ ಪ್ರಮಾಣವುಂಟಾಗಿ,**
**ಇವನಿನ್ನು ಸದ್ಭಾವದಿಂದರ್ಚಿಸೆಂದು ಅಪ್ಪಣೆಯಿತ್ತನು.**
**ಈ ಮರ್ಮವನರಿಯದೆ ಮನಬಂದಂತೆ ಮಾತಾಡುವ ಮನುಜರ**
**ಹುಳುಗೊಂಡದಲ್ಲಿಕ್ಕದೆ ಮಾಣ್ಬನೆ ನಮ್ಮ ಕೂಡಲಚೆನ್ನಸಂಗಮದೇವ?**[1]

ಇಷ್ಟಲಿಂಗವೊಂದು ಕಲ್ಲು. ಅದನ್ನು ಪೂಜಿಸುವುದರಿಂದ ದೈವಾನುಸಂಧಾನ ಮಾಡಿದಂತಾಗುವುದೆಂದು ಹೇಳುವುದನ್ನು ನಂಬುವುದು ಹೇಗೆ? ಎಂದು ಹಲವರು ಪ್ರಶ್ನಿಸುತ್ತಾರೆ. ಇಂಥ ಪ್ರಶ್ನೆಗಳು ಹನ್ನೆರಡನೆಯ ಶತಮಾನದಲ್ಲಿಯೂ ಚನ್ನಬಸವಣ್ಣನವರ ಗಮನಕ್ಕೆ ಬಂದಿರಬೇಕೆಂಬುದನ್ನು ಮೇಲಿನ ವಚನ ಸೂಚಿಸುತ್ತದೆ. ಆ ಪ್ರಶ್ನೆಗಳಿಗೆ ಉತ್ತರವೂ ಇಲ್ಲಿ ದೊರೆಯುತ್ತದೆ.

**'ಸರ್ವಂ ಖಲ್ವಿದಂ ಬ್ರಹ್ಮ'** ಅಂದರೆ ಎಲ್ಲವೂ ಬ್ರಹ್ಮವೇ ಎಂಬ ಮಾತು ಉಪನಿಷತ್ತಿನಲ್ಲಿ ಬರುತ್ತದೆ. ಅಣುರೇಣುತೃಣಕಾಷ್ಠದಲ್ಲಿ ಶಿವಾಂಶವಿರುವುದನ್ನು ನಮ್ಮ ತಾತ್ವಿಕ ಗ್ರಂಥಗಳು ಸಾರಿ ಹೇಳುತ್ತವೆ. ಮೂಲದಲ್ಲಿರುವ ಪರತತ್ವವು ಅನೇಕವಾಗಿ ಪರಿಣಮಿಸಿ ಈ ಜಗತ್ತಾಗಿದೆಯೆಂಬುದನ್ನು ಅದ್ವೈತ ಮತ್ತು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಗಳು ಸಾರಿವೆ. ಹೀಗಿರುವಾಗ ಎಲ್ಲವೂ ಶಿವಮಯ, ಕಲ್ಲು ಮಣ್ಣು ಕಟ್ಟಿಗೆ ಎಲ್ಲದರಲ್ಲಿಯೂ ಶಿವ ಚೈತನ್ಯವಡಗಿದೆಯೆಂಬುದು ಒಪ್ಪಲೇಬೇಕಾದ ವಿಷಯ.

ಇದು ತತ್ವಜ್ಞಾನದ ಮಾತಾಯಿತು. ಇಂದಿನ ವಿಜ್ಞಾನವೂ ಈ ಮಾತನ್ನು ಎತ್ತಿ ಹಿಡಿದಿದೆ. ಬ್ರಹ್ಮಾಂಡದಲ್ಲಿ ಅಚೇತನವೆಂಬುದೇ ಇಲ್ಲ. ಎಲ್ಲವೂ ಚೇತನಮಯ. ವಿಜ್ಞಾನ ಹೇಳುವಂತೆ ನಮ್ಮ ಅನುಭವಕ್ಕೆ ಬರುವ ವಿಶ್ವದ ಎಲ್ಲ ವಸ್ತುಗಳೂ ಅಣು ಪರಮಾಣುಗಳಿಂದ ರಚನೆಯಾಗಿವೆ. ಅಣು ಪರಮಾಣುಗಳ ರಚನೆಯಲ್ಲಿ ಎಲೆಕ್ಟ್ರಾನ್, ಪ್ರೋಟಾನ್‌ಗಳಂಥ ಸೂಕ್ಷ್ಮ ಕಣಗಳು ಸೇರಿಕೊಂಡಿವೆ. ಈ ಕಣಗಳು ಶಕ್ತಿಯ ಸಾಂದ್ರೀಕರಣದಿಂದ ರೂಪಗೊಂಡಿವೆ. ಅಂದರೆ ಎಲ್ಲಕ್ಕೂ ಶಕ್ತಿಯೇ ಅಥವಾ ಚೈತನ್ಯವೇ ಮೂಲ. ಈ ಬ್ರಹ್ಮಾಂಡ ಶಕ್ತಿಯ ರೂಪಾಂತರ. ಶಕ್ತಿಗೆ ಶೂನ್ಯವೇ ಮೂಲ. ಅದೇ ಪರಾತ್ಪರಸತ್ಯ (Ultimate reality) ಎಂದು ಇಂದಿನ ವಿಜ್ಞಾನ ಹೇಳುತ್ತದೆ. ತತ್ವಜ್ಞಾನ ಹೇಳಿದ್ದನ್ನು ಇಂದಿನ ವೈಜ್ಞಾನಿಕ ಸಂಶೋಧನೆಗಳು ದೃಢಪಡಿಸಿವೆ.

ಹೀಗೆ ಎಲ್ಲ ಚೈತನ್ಯಮಯವಾಗಿರುವಾಗ ಲಿಂಗ ನಿರ್ಮಾಣದಲ್ಲಿ ಉಪಯೋಗವಾಗುವ ಶಿಲೆಯಲ್ಲಿಯೂ ಚೈತನ್ಯವಿದ್ದಂತಾಯಿತು. ಇಂಥ ವಿಶಿಷ್ಟ ಕಲ್ಲಿನಿಂದ ಉಪಾಸನೆಗೆ ಸಾಧನವಾದ ಇಷ್ಟಲಿಂಗ ನಿರ್ಮಾಣವಾಗುತ್ತದೆ.

ಎಲ್ಲದರಲ್ಲಿಯೂ ಶಿವಾಂಶವಿರುವಾಗ ಯಾವುದಾದರೊಂದು ವಸ್ತುವನ್ನು ಉಪಾಸನೆಯ ಸಾಧನವನ್ನಾಗಿ ಏಕೆ ಉಪಯೋಗಿಸಬಾರದು? ಅದಕ್ಕೆ ಇಷ್ಟಲಿಂಗವೇ ಏಕೆ? ಶಿಲೆಯಿಂದ ರಚನೆಯಾದ ದೇವಾದಿ ದೇವತೆಗಳ ವಿಗ್ರಹಗಳಲ್ಲಿಯೂ ಶಿವಾಂಶ ಇದ್ದೇ ಇರುತ್ತದಲ್ಲವೆ? ಗುಡಿಗಳಲ್ಲಿ ಸ್ಥಾಪಿತವಾದ ಇವುಗಳನ್ನು ಉಪಾಸಿಸಿದರೆ ಸಾಲದೆ? ಎಂಬ ಪ್ರಶ್ನೆ ಉದ್ಭವವಾಗುತ್ತದೆ.

ಪರಾತ್ಪರಸತ್ಯ ನಿರಾಕಾರವಾದುದು. ಅದು ಅವಯವಗಳನ್ನು ಹೊಂದಿದ ಮೂರ್ತಿಯಲ್ಲ. ನಿರಾಕಾರದ ಸಂಕೇತ ನಿರಾಕಾರವಾಗಿಯೇ ಇರಬೇಕು. ಅಂತೆಯೇ ಶರಣರು ನಿರಾಕಾರ ಪರಬ್ರಹ್ಮನನ್ನು ಪ್ರತಿನಿಧಿಸುವ ನಿರವಯವ ಇಷ್ಟಲಿಂಗವನ್ನು ಉಪಾಸನೆಯ ಸಾಧನೆಯನ್ನಾಗಿ ಮಾಡಿಕೊಂಡರು. ವೃತ್ತ, ಕಟ,

೧. ಚನ್ನಬಸವಣ್ಣನ ವಚನಗಳು, ಸಮಗ್ರ ವಚನ ಸಂಪುಟ-೩ ಪುಟ ೨೮೨, ವಚನ ೯೦೫

ವರ್ತುಳ, ಗೋಮುಖ ಮತ್ತು ಬಾಣದಿಂದ ಕೂಡಿದ ಪಂಚಸೂತ್ರ ಶಿವಲಿಂಗದಲ್ಲಿ ತಾತ್ವಿಕ ಅರ್ಥವನ್ನು ತುಂಬಲಾಯಿತು. ಲಿಂಗದ ಕೆಳಭಾಗ ಜೀವ ಜಗತ್ತುಗಳನ್ನು ಪ್ರತಿನಿಧಿಸಿದರೆ ಅರ್ಧ ಗೋಲಾಕಾರವಾದ ಮೇಲ್ಭಾಗ ಶೂನ್ಯ ಅಥವಾ ಪರಶಿವನನ್ನು ಪ್ರತಿನಿಧಿಸುತ್ತದೆ. ಹೀಗೆ ಲಿಂಗ, ಜೀವ, (ಆತ್ಮ) ಜಗತ್ತು ಮತ್ತು ಈಶ್ವರನನ್ನು ಪ್ರತಿನಿಧಿಸಿ ಪೂಜನೀಯ ವಸ್ತುವಾಗುತ್ತದೆ.

ಹೀಗೆ ರಚಿತವಾದ ಶಿವಲಿಂಗಕ್ಕೆ ಕಂತೆಯನ್ನು ಧರಿಸಲಾಗುತ್ತದೆ. ಕಂತೆಯನ್ನು ಸ್ಥಾಯೀ ವಿದ್ಯುತ್ ಶಕ್ತಿಯನ್ನು ಉತ್ಪಾದಿಸುವ ವಸ್ತುಗಳಾದ ಗೇರುಬೀಜದ ಎಣ್ಣೆ, ಕರ್ಪೂರದ ಕಾಡಿಗೆ ಅಥವಾ ತುಪ್ಪದ ಕಾಡಿಗೆ ಮತ್ತು ಆಕಳದ ಒಣಗಿದ ಸಗಣಿಯನ್ನು ಶಾಸ್ತ್ರೋಕ್ತವಾಗಿ ಸುಟ್ಟು ತಯಾರಿಸಿದ ಬೂದಿ ಮುಂತಾದವುಗಳಿಂದ ಯೋಗಸಾಧನೆಗೆ ಅನುಕೂಲವಾಗುವಂತೆ ಸಿದ್ಧಪಡಿಸಲಾಗುತ್ತದೆ. ಭಾರತೀಯ ತತ್ವಗ್ರಂಥಗಳಲ್ಲಿ ಹೃದಯವನ್ನು ಅಧೋಮುಖ ಕಮಲದ (Inverted bud of Lotus) ಮೊಗ್ಗಿಗೆ ಹೋಲಿಸಲಾಗಿದೆ. ಮಾನವನ ಹೃದಯ ಮತ್ತು ಬ್ರಹ್ಮರಂಧ್ರಗಳು ಪರಮಾತ್ಮನ ನಿವಾಸ ಸ್ಥಾನಗಳೆಂಬ ಮಾತು ಬರುತ್ತದೆ. ಈ ಕಾರಣವಾಗಿ ಲಿಂಗದ ಮೇಲಿನ ಕಂತೆಗೆ ಅಧೋಮುಖ ಹೃದಯದ ಆಕಾರವನ್ನು ಕೊಡಲಾಯಿತು. ಅಲ್ಲದೆ ಲಿಂಗಕ್ಕೆ ಆವರಿಸಿದ ಹೊಳೆಯುವ ಕಪ್ಪು ಕಂತೆ ದೃಷ್ಟಿಯ ಏಕಾಗ್ರತೆಗೆ ಅನುಕೂಲವಾಗಿ ದೃಷ್ಟಿಯೋಗದಿಂದ ಅಂತರಂಗದ ದೈವೀಶಕ್ತಿ ಪ್ರಕಟವಾಗಲು ಅನುಕೂಲ ಮಾಡಿಕೊಡುತ್ತದೆ.

ಹೀಗೆ ತಯಾರಿಸಿದ ಕಂತೆಯುಕ್ತ ಲಿಂಗದಲ್ಲಿ ಆಧ್ಯಾತ್ಮ ಸಿದ್ಧಿಯ ಪರಮಾವಧಿಯನ್ನು ತಲುಪಿದ ಗುರು ತನ್ನ ಹಸ್ತ ಮತ್ತು ಶಿಷ್ಯನ ಮಸ್ತಕ ಸಂಯೋಗದಿಂದ ಶಿಷ್ಯನ ಬ್ರಹ್ಮರಂಧ್ರದಲ್ಲಿರುವ ಚಿತ್ಕಳೆಯನ್ನು ಗ್ರಹಿಸಿ ಅದನ್ನು ಲಿಂಗದಲ್ಲಿ ಸ್ಥಾಪಿಸಿ; ಈ ಲಿಂಗ ನಿನ್ನ ಅಂತರಂಗದ ಅರಿವಿನ್ನ ಕುರುಹೆಂದು ಹೇಳಿ ಪೂಜಿಸಲು ಶಿಷ್ಯನಿಗೆ ಕೊಡುತ್ತಾನೆ. ಈ ದೀಕ್ಷೆಯಿಂದ ಇಷ್ಟಲಿಂಗ ಶಾಸ್ತ್ರಸಮ್ಮತವಾಗಿ ತಾತ್ವಿಕವಾಗಿ ಪರಶಿವೋ ಪಾಸನೆಯ ಸಾಧನವಾಗುತ್ತದೆ. ಹೀಗೆ ಗುರುವಿನಿಂದ ಅನುಗ್ರಹಿತವಾದ ಲಿಂಗ ಕಲ್ಲಲ್ಲ. ಶ್ರೀ ಸಿದ್ಧರಾಮೇಶ್ವರ ಮಾತಿನಲ್ಲಿಯೇ ಹೇಳುವುದಾದರೆ;

**ಕಟೆದ ಕಲ್ಲು ಲಿಂಗವೆನಿಸಿತ್ತು; ಕಟೆಯದ ಕಲ್ಲು ಕಲ್ಲೆನಿಸಿತ್ತು.**
**ಪೂಜಿಸಿದ ಮಾನವ ಭಕ್ತನೆನಿಸಿದನು;**
**ಪೂಜಿಸದ ಮಾನವ ಮಾನವನೆನಿಸಿದನು;**
**ಕಲ್ಲಾದಡೇನು? ಪೂಜೆಗೆ ಫಲವಾಯಿತ್ತು,**
**ಮಾನವನಾದಡೇನು? ಭಕ್ತಿಗೆ ಕಾರಣಿಕನಾದನು.**
**ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ ನೋಡಾ**
**ಕಪಿಲಸಿದ್ಧಮಲ್ಲಿಕಾರ್ಜುನಾ?**

ಒಟ್ಟಿನಲ್ಲಿ ಲಿಂಗ ಶೂನ್ಯ ಅಥವಾ ಪರಶಿವನ ಸಂಕೇತ. ನಮ್ಮ ಅರಿವಿನ ಅಂದರೆ ನಮ್ಮ ಅಂತರಂಗದ ದೈವೀಶಕ್ತಿಯ ಸಂಕೇತ. ಲಿಂಗದಲ್ಲಿ ನಿರ್ಮಾಣವಾಗುವ ಶಿಲೆ ಮತ್ತು ಕಂತೆ ದೃಷ್ಟಿಯೋಗಕ್ಕೆ ಅನುಕೂಲವಾದ ವಸ್ತುಗಳಿಂದ ನಿರ್ಮಾಣ ವಾಗುವುದರಿಂದ ಇದಕ್ಕೆ ವೈಜ್ಞಾನಿಕ ಹಿನ್ನೆಲೆ ಇದೆ. ಈ ಮೊದಲೇ ಹೇಳಿದಂತೆ, ಈ ಲಿಂಗದ ಪರಿಕಲ್ಪನೆಯಲ್ಲಿಯೂ ವೈಜ್ಞಾನಿಕತೆ ಇದೆ.

ಇಷ್ಟಲಿಂಗದ ಮೂಲಕ ಸಾಧಿಸುವ ದೃಷ್ಟಿಯೋಗ, ಲಿಂಗಯೋಗ, ಅಥವಾ ಅನಿಮಿಷಯೋಗ, ಶಿವಯೋಗದಲ್ಲಿ ಎಲ್ಲ ಯೋಗಗಳ ಸಮನ್ವಯವಿದೆ. ಇಲ್ಲಿ ಭಕ್ತಿಯೋಗ, ಕರ್ಮಯೋಗ, ರಾಜಯೋಗ, ಹಾಗೂ ಜ್ಞಾನಯೋಗಗಳು ಸಮಾವೇಶಗೊಂಡು ಇದೊಂದು ಪೂರ್ಣಯೋಗವಾಗಿ ಪರಿಣಮಿಸಿದೆ. ಲಿಂಗವೇಪರಶಿವನೆಂದು ತಿಳಿದು ಅದನ್ನು ಪರಿಶುದ್ಧ ಮನಸ್ಸಿನಿಂದ ಅನನ್ಯ ಭಕ್ತಿಯಿಂದ ಪೂಜಿಸುವುದೇ ಭಕ್ತಿಯೋಗ. ಸತ್ಯ ಶುದ್ಧ ಕಾಯಕ ಮಾಡಿ ಬಂದ ಧನದಿಂದ ಜಂಗಮ ದಾಸೋಹ ಮಾಡುವುದೇ ಕರ್ಮಯೋಗ ಅಥವಾ ಕಾಯಕ ಯೋಗ. ಇಷ್ಟಲಿಂಗದ ಮೂಲಕ ತಾನೇ ಪರಶಿವನೆಂದು ಜ್ಞಾನೋದಯವಾಗಿ ಅದು ತಾನಾಗುವುದೇ ಜ್ಞಾನಯೋಗ. ಈ ರೀತಿಯಲ್ಲಿ ಲಿಂಗಯೋಗ ಅಥವಾ ಶಿವಯೋಗವು ಪರಿಪೂರ್ಣಯೋಗ. ಇದು ಆಧ್ಯಾತ್ಮ ಸಿದ್ಧಿಯನ್ನು ಸುಲಭವಾಗಿ ಪಡೆಯುವ ಸರಳ ಹಾಗೂ ಸುಲಭ ಮಾರ್ಗ. ಇದೆಲ್ಲ ಇದ್ದರೂ ಇಂದು ನಮ್ಮಲ್ಲಿ ಅನೇಕರು ಸಮಾಧಿಯೋಗ ಹಾಗೂ ರಾಜಯೋಗದ ಬಗೆಗೆ ತಮ್ಮದೇ ಆದ ವ್ಯಾಖ್ಯಾನ ನೀಡಿ ವೀರಶೈವರನ್ನು ದಿಕ್ಕುತಪ್ಪಿಸುತ್ತಿರುವುದು ಮತ್ತು ವೀರಶೈವರಾದವರು ಅವುಗಳಿಗೆ ಮಾರುಹೋಗಿ ಅವರನ್ನು ಅನುಸರಿಸುತ್ತಿರುವುದು ಶೋಚನೀಯ ಸಂಗತಿಯಾಗಿದೆ. ನಮ್ಮಲ್ಲಿಯೇ ಹಾಲುಹಳ್ಳ ಹರಿಯುತ್ತಿರಲು ಬೇರೆಯವರು ತೋಡಿದ ಬಾವಿಯ ಉಪ್ಪು ನೀರಿಗೆ ಮಾರುಹೋಗದೆ ಗುರು ಕೊಟ್ಟ ಇಷ್ಟಲಿಂಗದ ಮೂಲಕ, ಶರಣರು ವಚನಗಳಲ್ಲಿ ಪ್ರತಿಪಾದಿಸಿರುವ ಶಿವಯೋಗದ ಮೂಲಕ ಲೌಕಿಕಹಾಗೂ ಪಾರಮಾರ್ಥಿಕ ಪರಿಪೂರ್ಣತೆಯನ್ನು ಸಾಧಿಸುವಂತಾಗಬೇಕು. □





# ಮಗುವಿನ ವ್ಯಕ್ತಿತ್ವ ವಿಕಾಸದಲ್ಲಿ ಕುಟುಂಬದ ಪಾತ್ರ

- ಡಾ. ಡಿ. ಶಿವಪ್ಪ
ನಿವೃತ್ತ ಮುಖ್ಯಸ್ಥರು, ಸ್ನಾತಕೋತ್ತರ ಶಿಕ್ಷಣ ವಿಭಾಗ,
ಬೆಂಗಳೂರು ವಿಶ್ವವಿದ್ಯಾಲಯ

ವ್ಯಕ್ತಿತ್ವ ಎಂಬುದು ಒಂದು ಸಂಕೀರ್ಣವಾದ ಹಾಗೂ ಅಸಾಧಾರಣ ವಿಚಾರ. ವ್ಯಕ್ತಿತ್ವವು ವ್ಯಕ್ತಿಯ ವಿಶೇಷ ಗುಣಲಕ್ಷಣಗಳು, ಸಾಮರ್ಥ್ಯಗಳು, ಭಾವನಾತ್ಮಕ ಹಾಗೂ ಸಾಮಾಜಿಕ ವಿಶಿಷ್ಟಗುಣಗಳು, ಆಸಕ್ತಿ, ಮನೋವೃತ್ತಿಗಳು ಇವುಗಳ ಮೇಲೆ ಗಮನ ಸೆಳೆಯುತ್ತದೆ. ವ್ಯಕ್ತಿಯ ಜೈವಿಕ ಅಂಶಗಳು ಆತನ ಸಾಮಾಜಿಕ ಹಾಗೂ ಬೌದ್ಧಿಕ ಜಗತ್ತಿನೊಂದಿಗೆ ಸಂಘರ್ಷಣೆಯಾದಾಗ ಹೊರಹೊಮ್ಮುವ ಅಂಶವೇ ವ್ಯಕ್ತಿಯ ವ್ಯಕ್ತಿತ್ವ ಎಂದು ಮನಃಶಾಸ್ತ್ರಜ್ಞರು ಪರಿಗಣಿಸಿದ್ದಾರೆ. ಎಂದರೆ ವ್ಯಕ್ತಿಯ ದೈಹಿಕ ಭಾವನಾತ್ಮಕ, ಬೌದ್ಧಿಕ ಹಾಗೂ ಆಧ್ಯಾತ್ಮಿಕ ಅಂಶಗಳನ್ನು ಒಳಗೊಂಡ ಸಮತೂಕದ ಅಂಶವೇ ವ್ಯಕ್ತಿಯ ವ್ಯಕ್ತಿತ್ವ.

ವ್ಯಕ್ತಿತ್ವ ವಿಕಾಸವಾಗಲು, ವ್ಯಕ್ತಿಯ ದೈಹಿಕಸ್ಥಿತಿಗಳಿಗೆ ಸಂಬಂಧಿಸಿದ ಅಂಶಗಳು. ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಹೇಗೆ ಮತ್ತು ಎಷ್ಟರಮಟ್ಟಿಗೆ ಕಾರಣ ಎಂಬುದನ್ನು ತಿಳಿಯಲು ಮನೋವಿಜ್ಞಾನಿಗಳು ಪ್ರಯತ್ನ ನಡೆಸಿದ್ದಾರೆ. ವ್ಯಕ್ತಿತ್ವವು ಹದವಾಗಿ ಮುದಗೊಳ್ಳುವಲ್ಲಿ ವ್ಯಕ್ತಿಯ ಬಾಲ್ಯದ ಪ್ರಾಮುಖ್ಯತೆಯನ್ನು ಹಲವಾರು ಮನೋವಿಜ್ಞಾನಿಗಳು ಒತ್ತುಕೊಟ್ಟು ಹೇಳುತ್ತಾರೆ. ಸಿಗ್ಮಂಡ್ ಫ್ರಾಯ್ಡ್ ಎಂಬ ಮನೋವಿಶ್ಲೇಷಣಕಾರನ ಪ್ರಕಾರ ವ್ಯಕ್ತಿಯು ಪ್ರಥಮತಃ ತನ್ನ ಬಾಲ್ಯದ ಮೊದಲ ಐದು ವರ್ಷ ಕಳೆಯುವಷ್ಟರಲ್ಲಿಯೇ ವ್ಯಕ್ತಿತ್ವ ವಿಕಾಸದ ಆಸ್ತಿಭಾರ ನಡೆದೇ ಹೋಗಿರುತ್ತದೆ. ವ್ಯಕ್ತಿತ್ವ ವಿಕಾಸದಲ್ಲಿ ಹಲವಾರು ಅಂಶಗಳು ತಮ್ಮ ಪ್ರಭಾವವನ್ನು ಬೀರುತ್ತವೆ. ಅವುಗಳಲ್ಲಿ ಸಾಮಾಜಿಕ ನಿರ್ಣಾಯಕಗಳೂ ವ್ಯಕ್ತಿತ್ವ ರೂಪಿಸುವಲ್ಲಿ ತಮ್ಮ ಪಾತ್ರವನ್ನು ವಹಿಸುತ್ತವೆ. ಸಾಮಾಜಿಕ ಅಂಶಗಳು ಎರಡು ಬಗೆಯಲ್ಲಿ ಕಾಣುತ್ತವೆ. ಒಂದು ಕುಟುಂಬದ ಪ್ರಭಾವ ಮತ್ತೊಂದು ಶಾಲೆಯ ಪ್ರಭಾವ. ಈಗ ಕುಟುಂಬದ ಪ್ರಭಾವದ ಬಗ್ಗೆ ತಿಳಿಯೋಣ.

**ಕುಟುಂಬದ ಪ್ರಭಾವ**

ವ್ಯಕ್ತಿತ್ವ ವಿಕಾಸದಲ್ಲಿ ಕುಟುಂಬವು ಮಗುವಿನ ಬಾಲ್ಯದಲ್ಲಿ ಕೊಡುವ ಅನುಭವಗಳು ಮಹತ್ತರ ಪಾತ್ರವನ್ನು ವಹಿಸುತ್ತವೆ. ಮಗುವು ಪಡೆಯುವ ಮೊದಲ ಪರಿಸರ ಎಂದರೆ ಮನೆ. ಇಲ್ಲಿ ತನ್ನ ತಂದೆ-ತಾಯಿಗಳ ಮತ್ತು ಕುಟುಂಬದ ಇತರ ಸದಸ್ಯರ ನಿಕಟ ಸಂಪರ್ಕವನ್ನು ಮಗುವು ಪಡೆಯುತ್ತದೆ. ಮಗುವಿನ ಆಶೋತ್ತರಗಳು, ನಿರೀಕ್ಷೆಗಳು ಮತ್ತು ಭಾವನಾತ್ಮಕ ಅನಿಸಿಕೆಗಳು, ಬಾಲ್ಯದಲ್ಲೇ ರೂಪುಗೊಳ್ಳುತ್ತವೆ. ಬಾಲ್ಯದ ಅನುಭವಗಳು ಮಗುವಿನ ವ್ಯಕ್ತಿತ್ವ ನಿರೂಪಣೆಯ ನಿರ್ಣಾಯಕ ಅಂಶಗಳಾಗಿರುತ್ತವೆ. ಮಗುವಿಗೆ ತಂದೆ-ತಾಯಿಯರು ಕೊಡುವ ತರಬೇತಿಯ ರೀತಿ-ನೀತಿಗಳು ವ್ಯಕ್ತಿತ್ವ ವಿಕಾಸದಲ್ಲಿ ಪ್ರಮುಖಪಾತ್ರವನ್ನು ವಹಿಸುತ್ತವೆ.



ಬ್ರಾಡಿ ಎಂಬ ಮನೋವಿಜ್ಞಾನಿಯು ೩೨ ಯುವ ತಾಯಂದಿರನ್ನು ಪರೀಕ್ಷೆಗೊಳಪಡಿಸಿದರು. ತಾಯಂದಿರು ತಮ್ಮ ಮಕ್ಕಳಿಗೆ ಹಾಲು ಕೊಡುವ ವಿಧಾನಗಳು, ಮಕ್ಕಳ ಲಾಲನೆ-ಪಾಲನೆ ಮಾಡುವ ಬಗೆಗಳು ಮತ್ತು ಮಕ್ಕಳೊಂದಿಗೆ ತಾಯಂದಿರು ಮಾತನಾಡುವ ರೀತಿ-ನೀತಿಗಳನ್ನು ಆಳವಾಗಿ ಬ್ರಾಡಿಯವರು ಅಭ್ಯಾಸ ಮಾಡಿದರು. ತಾಯಿಯು ಮಕ್ಕಳನ್ನು ಪೋಷಿಸುವ ರೀತಿ-ನೀತಿಗಳು ಮಗುವಿನ ಭವಿಷ್ಯದ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಬಹಳ ಮುಖ್ಯವಾದವು ಎಂದು ತೀರ್ಮಾನಕ್ಕೆ ಬಂದರು.

ಕುಟುಂಬದ ರಚನೆಯೂ ಸಹ ಮಗುವಿನ ವ್ಯಕ್ತಿತ್ವದ ಮೇಲೆ ಮಹತ್ವದ ಪ್ರಭಾವವನ್ನು ಬೀರಬಲ್ಲದು. ಗಂಡ-ಹೆಂಡತಿ ಮತ್ತು ಮಕ್ಕಳು ಮಾತ್ರ ಇರುವ ಚಿಕ್ಕ ಕುಟುಂಬದಲ್ಲಿ ಮತ್ತು ತಂದೆ-ತಾಯಿಗಳ ನಡುವೆ ಆಳವಾದ ಹಾಗೂ ನಿಕಟವಾದ ಭಾವನಾತ್ಮಕ ಸಂಬಂಧವಿರುತ್ತದೆ. ಆದರೆ ಅಂತಹ ಕುಟುಂಬ

ದಲ್ಲಿ ತಂದೆ ತಾಯಿಗಳ ಗೈರುಹಾಜರಿಯಲ್ಲಿ, ಮಗುವು ಭಾವೋದ್ವೇಗಗಳ ಸುಳಿಯಲ್ಲಿ ಸಿಕ್ಕು ವಿಲಿವಿಲಿ ಒದ್ದಾಡುವ ಸ್ಥಿತಿಯಲ್ಲಿರಲೂ ಸಾಧ್ಯವಿದೆ.

ಆದರೆ ಸಮಷ್ಟಿಕುಟುಂಬದಲ್ಲಿ, ಮಗುವು ತನ್ನ ತಂದೆತಾಯಿಗಳೊಂದಿಗೇ ಇರುವುದಲ್ಲದೆ, ಕುಟುಂಬದ ಇತರ ಸದಸ್ಯರುಗಳಾದ ಅಜ್ಜ-ಅಜ್ಜಿ, ಚಿಕ್ಕಪ್ಪ-ದೊಡ್ಡಪ್ಪ, ಚಿಕ್ಕಮ್ಮ-ದೊಡ್ಡಮ್ಮ ಮತ್ತು ಇತರ ಸದಸ್ಯರೊಂದಿಗೂ ಇರುತ್ತದೆ. ಮಗುವು ಆಗ ಕುಟುಂಬದ ಬಗ್ಗೆ ವಿಸ್ತಾರವಾದ ಅನುಭವಗಳನ್ನು ಪಡೆಯುತ್ತದೆ. ತನ್ಮೂಲಕ ಸಮಾಜೀಕರಣದ ಉತ್ತಮ ಅವಕಾಶಗಳನ್ನು ಹೊಂದುತ್ತದೆ. ಹೀಗಾಗಿ ಮಗುವು, ಜಂಟೀ ಕುಟುಂಬದಲ್ಲಿ, ತನ್ನದೇ ಆದ ಕೌಟುಂಬಿಕ ಸಂಸ್ಕೃತಿಯನ್ನು ಪಡೆಯುತ್ತದೆ.

ಬಾಲ್ಯದಲ್ಲಿ ಮಕ್ಕಳು ತಂದೆ-ತಾಯಂದಿರಿಂದ ಅಗಲುವಿಕೆಯ ನೋವನ್ನುಂಡು ಅತಿಯಾದ ಭಾವೋದ್ವೇಗಕ್ಕೆ ಒಳಗಾದಾಗ ಅಥವಾ ಅವರಿಂದ ಉಪೇಕ್ಷಿಸಲ್ಪಟ್ಟಾಗ, ಇಂತಹ ಸನ್ನಿವೇಶವು ಮಗುವಿನ ವ್ಯತ್ತಿವಿಕಾಸದ ಮೇಲೆ ಪ್ರಬಲವಾದ ಪ್ರತಿಕೂಲಗಳನ್ನು ಹೊಂದುತ್ತದೆ. ಅಂತಹ ಮಕ್ಕಳು ಬೆಳೆದು ದೊಡ್ಡವರಾದಾಗ, ಹತ್ತಾರು ರೀತಿಯಲ್ಲಿ ಭಾವೋದ್ವೇಗ ನಡವಳಿಕೆಗಳಿಗೆ ಒಳಗಾಗುತ್ತಾರೆ.

ಮಗುವನ್ನು ಪೋಷಿಸುವ ವಿಧಾನಗಳು ಮತ್ತು ವ್ಯಕ್ತಿತ್ವ ವಿಕಾಸಕ್ಕೆ ಇರುವ ಸಂಬಂಧವನ್ನು ಹೆಚ್ಚು ಹೆಚ್ಚು ಸಂಶೋಧನಾ ಅಧ್ಯಯನಗಳು ಸಾರಿಸಾರಿ ಹೇಳುತ್ತವೆ. ಮಕ್ಕಳಿಗೆ ಹಾಲುಣಿಸುವ ರೀತಿ, ಅವರನ್ನು ಶುಭ್ರತೆಗೊಳಿಸುವ ವಿಧಾನಗಳು, ಮಕ್ಕಳ ಎದುರು ನಿಲ್ಲುವ ಪ್ರವೃತ್ತಿಯ ಮೇಲೆ ತಂದೆ-ತಾಯಿಯರು ಬಲವಂತವಾಗಿ ಹೇರುವ ದಮನ ಪದ್ಧತಿಗಳು, ಅವರು ಮಕ್ಕಳಿಗೆ ಕೊಡುವ ದೈಹಿಕಶಿಕ್ಷೆಯ ರೀತಿ ಮತ್ತು ಹುಚ್ಚಾಪಟ್ಟೆ ಮಕ್ಕಳನ್ನು ಹೆದರಿಸುವ ವಿಧಾನಗಳು ಇವೇ ಮುಂತಾದ ತಂದೆ-ತಾಯಂದಿರ ಕ್ರೂರ ಹಾಗೂ ಅಮಾನವೀಯ ನಡವಳಿಕೆಗಳು ಬಹುಮಟ್ಟಿಗೆ ಮಕ್ಕಳ ವ್ಯಕ್ತಿತ್ವ ವಿಕಾಸದಲ್ಲಿ ಧಕ್ಕೆಯನ್ನುಂಟುಮಾಡುತ್ತವೆ.

ಆಕ್ಷೇಪಣೆ ಇಲ್ಲದೆ ಕೆಲಸ ಮಾಡಲು ಅವಕಾಶ ವೀಯುವ ಪರಿಸರವು ಮಗುವಿನಲ್ಲಿ ಇತರೆಯವರೊಂದಿಗೆ ಹೊಂದಿಕೊಂಡು ಹೋಗುವ ಸ್ನೇಹಪೂರ್ವಕ ಭಾವನೆಗಳನ್ನು ಮೂಡಿಸುತ್ತವೆ. ಅಷ್ಟೇ ಅಲ್ಲದೆ, ಅಂತಹ ಮಗುವು ಸೃಜನಾತ್ಮಕವಾದ ಸುಪ್ತಪ್ರತಿಭೆಗಳನ್ನು ವ್ಯಕ್ತಪಡಿಸುತ್ತದೆ.

ಮಗುವಿನ ಆಕ್ರಮಣಕಾರಿ ಮನೋವೃತ್ತಿಯನ್ನು ತಂದೆತಾಯಿಗಳು ಶಿಕ್ಷೆಯ ಮೂಲಕ ಹತೋಟಿಗೆ ತರಲು ಪ್ರಯತ್ನಿಸಿದಲ್ಲಿ ಅಂತಹ ಆಕ್ರಮಣಕಾರಿ ವರ್ತನೆಯು ಇನ್ನೂ ಹೆಚ್ಚಾಗುತ್ತದೆಯೇ ಹೊರತು ಕಡಿಮೆಯಾಗುವುದಿಲ್ಲ. ಏಕೆಂದರೆ ಆಕ್ರಮಣಕಾರಿ ವರ್ತನೆಯು ಹತಾಶೆಯ ಹೊಗೆಯನ್ನು ಕಾರುತ್ತಿದೆ. ಇದನ್ನು ಶಿಕ್ಷೆಯ ಮೂಲಕ ಹತೋಟಿಗೆ ತರಲು ಯತ್ನಿಸಿದರೆ, ಆ ಶಿಕ್ಷೆಯೇ ಮಗುವಿನ ಉಗ್ರಮನಸ್ಸಿಗೆ ಪ್ರೇರಕವಾಗಿ ಮತ್ತಷ್ಟು ಆಕ್ರಮಣಕಾರಿ ಪ್ರವೃತ್ತಿ ಹೆಚ್ಚುತ್ತದೆ. ಹೀಗಾಗಿ ಅಂತಹ ಮಗುವು ತಿದ್ದಲಾಗದ ಮಹಾಮೊಂಡನಾಗುತ್ತಾನೆ; ಜಗಭಂಡನಾಗುತ್ತಾನೆ. ಆದ್ದರಿಂದ ಮಗು ಮತ್ತು ತಂದೆ-ತಾಯಿಗಳ ನಡುವಿನ ಮಧುರ ಬಾಂಧವ್ಯವು ವ್ಯಕ್ತಿತ್ವ ವಿಕಾಸದಲ್ಲಿ ಬಹಳ ಮುಖ್ಯವಾದುದು. ಪರಸ್ಪರ ಪ್ರೇಮ-ವಿಶ್ವಾಸ, ಆದರ-ಅಭಿಮಾನ ಮತ್ತು ಮಗು-ತಂದೆ-ತಾಯಿಯರ ನಡುವೆ ಪ್ರೇಮಸಂಚಿತ ಬಾಂಧವ್ಯ ಇರುವಂತಹ ಕುಟುಂಬದಿಂದ ಬಂದ ಮಕ್ಕಳು ಇತರರೊಂದಿಗೆ ಹೊಂದಿಕೊಂಡು ಬಾಳುವಂತವರಾಗಿದ್ದು, ಸ್ವಾವಲಂಬಿಗಳೂ ಮತ್ತು ಆತ್ಮವಿಶ್ವಾಸಿಗಳೂ ಆಗಿರುತ್ತಾರೆಂದು ಮತ್ತು ಯಾವ ಮಕ್ಕಳು ಬಿರುಕುಬಿಟ್ಟ (ಒಡೆದು ಚೂರುಚೂರಾದ) ಕುಟುಂಬದಿಂದ ಬಂದಿರುತ್ತಾರೋ ಅಂತಹವರು, ಮನೋಭಗ್ನತೆ, ಹತಾಶೆ, ಸಿಡುಕಿನ ಸ್ವಭಾವ ಹಾಗೂ ಆಕ್ರಮಣಕಾರಿ ಪ್ರವೃತ್ತಿಯನ್ನು ಪಡೆಯುತ್ತಾರೆಂದು ಮನೋವಿಜ್ಞಾನದಲ್ಲಿ ನಡೆದ ಹಲವಾರು ಸಂಶೋಧನೆಗಳು ಸಾರಿ ಹೇಳುತ್ತವೆ. ಇದೂ ಅಲ್ಲದೆ, ತಂದೆ ಮತ್ತು ತಾಯಿ ಇವರ ನಡುವೆ ಭಾವನಾತ್ಮಕ ಹಾಗೂ ಮಧುರ ಸಂಬಂಧವಿದ್ದಲ್ಲಿ, ಅಂತಹ ವಾತಾವರಣದಲ್ಲಿ ಬೆಳೆವ ಮಗುವಿನಲ್ಲಿ ಭದ್ರತೆ, ನೆಮ್ಮದಿಯ ನೆರಳು, ಪ್ರೀತಿ ಮತ್ತು ವಿಶ್ವಾಸಗಳು ಬೆಳೆದುಬರುತ್ತವೆ.

ತಾಯಿ-ತಂದೆಯರಿಂದ ತಿರಸ್ಕರಿಸಲ್ಪಟ್ಟ ಮಕ್ಕಳೂ ಇವೆ. ಅವರ ತಿರಸ್ಕಾರ ಮಗುವಿನ ಮನಸ್ಸಿನಲ್ಲಿ ಭೀತಿಯ ಬೀಜವನ್ನು ಹುಟ್ಟುಹಾಕುತ್ತದೆ. ಆ ಮಗುವು ಅವರಿಗೆ ಹತ್ತಿರ ಹತ್ತಿರ ಸರಿಯಲು ಯತ್ನಿಸಿ, ವಿಫಲವಾಗಿ, ಭದ್ರತೆಯ ನೆಲೆಯನ್ನು ಕಳೆದುಕೊಳ್ಳುತ್ತದೆ. ಹೀಗೆ ಮಾನಸಿಕ ಭದ್ರತೆ ಇಲ್ಲದ ಮಕ್ಕಳು ತಾಯಿ-ತಂದೆಯವರ ತಿರಸ್ಕಾರದಿಂದಾಗಿ ಬಾಲಾಪರಾಧಿಗಳಾಗುವ ಸಾಧ್ಯತೆಗಳೇ ಹೆಚ್ಚು. ತಾಯಿಯು ಮಗುವನ್ನು ತಿರಸ್ಕರಿಸಿದರೆ, ಮಗುವೂ ರೊಚ್ಚಿಗೆದ್ದು, ತಾಯಿಯನ್ನು ದ್ವೇಷಿಸಲು ಆರಂಭಿಸುತ್ತದೆ. ಅಂತಹ ಮಗು ಬೆಳೆದು ದೊಡ್ಡವನಾದಾಗ ಬಂಡಾಯ ಪ್ರವೃತ್ತಿಯನ್ನು ಬೆಳೆಸಿಕೊಳ್ಳುತ್ತದೆ. ಅಷ್ಟೇ





ಏಕೆ, ಆ ಮಗುವು ಕುಟುಂಬದ ಹಾಗೂ ಸಮಾಜದ ಕಟ್ಟುಪಾಡುಗಳನ್ನು ಜಾಡಿಸಿ ಒದೆಯುತ್ತದೆ. ತನ್ಮೂಲಕ ತನ್ನ ತಂದೆ-ತಾಯಂದಿರ ಮೇಲೆ ಸೇಡು ತೀರಿಸಿಕೊಂಡ ಸಮಾಧಾನವನ್ನು ಪಡೆಯುತ್ತದೆ.

ಕುಟುಂಬದಲ್ಲಿ ವ್ಯಕ್ತಿತ್ವ ರೂಪಿಸುವಲ್ಲಿ ಪರಿಣಾಮ ಬೀರುವ ಮತ್ತೊಂದು ಅಂಶವೆಂದರೆ ಸೋದರ / ಸೋದರಿ ಸ್ಪರ್ಧೆ. ಮಗು ತಾನು ಹುಟ್ಟಿದ ನಂತರಹುಟ್ಟಿ ಬರುವ ತನ್ನ ಸೋದರ ಅಥವಾ ಸೋದರಿಯನ್ನು ತನ್ನ ಪ್ರತಿಸ್ಪರ್ಧಿಯಂತೆ ನೋಡುತ್ತದೆ. ತನ್ನ ನಂತರ ಹುಟ್ಟಿಬರುವ ಮತ್ತೊಂದು ಮಗುವು ಮೊದಲನೆಯ ಮಗುವಿಗೆ ನುಂಗಬಾರದ ಕಹಿಗುಳಿಗೆ; ಸಹಿಸಲಾರದ ಬಲವಾದ ಚಾಟಿ ಏಟು. ಈಗ ಬಂದ ಮಗು ತನ್ನ ತಾಯಿಯ ಗಮನ ಸೆಳೆಯುತ್ತದೆ. ಇಲ್ಲಿಯ ತನಕ ತನ್ನ ಮೇಲೆ ಬೀಳುತ್ತಿದ್ದ ಗಮನ, ತಾನು ಪಡೆದು ಸವಿಯುತ್ತಿದ್ದ ಪ್ರೀತಿ-ಪ್ರೇಮ ವಿಶ್ವಾಸಗಳೆಲ್ಲಾ ತನ್ನ ನಂತರ ಬಂದ ಮಗುವಿನ ಕಡೆಗೆ ಕೇಂದ್ರೀಕೃತವಾಗುತ್ತದೆ. ಹೀಗಾಗಿ ತಾನು ಎಲ್ಲರಿಂದಲೂ ತಿರಸ್ಕರಿಸಲ್ಪಟ್ಟವನು. ತನ್ನನ್ನು ಯಾರೂ ಪ್ರೀತಿಸುವುದಿಲ್ಲ ಎಂಬ ಭಾವನೆ ಅತಿಯಾಗಿ, ಆ ಮಗುವು ತನ್ನ ತಂಗಿ ಅಥವಾ ತಮ್ಮನನ್ನು ದ್ವೇಷಿಸಲು ಆರಂಭಿಸುತ್ತದೆ. ಹೇಗಾದರೂ ಮಾಡಿ ತಾಯಿ-ತಂದೆಯವರ ಗಮನ ಸೆಳೆಯಲು ಪ್ರಯತ್ನಿಸಿ, ಸೋತಾಗ ಹತಾಶೆಗೊಳ್ಳುತ್ತದೆ ಮಗು. ಈ ಹತಾಶೆ ಆ ಇನ್ನೊಂದು ಮಗುವಿನ ಮೇಲಿನ ದ್ವೇಷವನ್ನು ದ್ವಿಗುಣಗೊಳಿಸುತ್ತದೆ. ಆದ್ದರಿಂದ ತಾಯಿ ತಂದೆಯರು ಇಂತಹ ಸಂದರ್ಭದಲ್ಲಿ, ಮೊದಲಿನ ಮಗುವಿನ ಆತ್ಮವಿಶ್ವಾಸಕ್ಕೆ ಧಕ್ಕೆಬಾರದಂತೆ, ಪ್ರೀತಿ-ವಿಶ್ವಾಸಗಳನ್ನು ಅದರ ಮೇಲೂ ಧಾರೆ ಎರೆಯಲೇಬೇಕು. ಆಗ ಮಗುವು ಚೇತರಿಸಿಕೊಳ್ಳುತ್ತದೆ; ತನ್ಮೂಲಕ ಅದರ ವ್ಯಕ್ತಿತ್ವವೂ ಹದಗೊಳ್ಳುತ್ತದೆ.

ವ್ಯಕ್ತಿತ್ವವಿಕಾಸದಲ್ಲಿ ಮಹತ್ತರ ಪಾತ್ರ ವಹಿಸುವ ಮತ್ತೊಂದು ಅಂಶವೆಂದರೆ ಕುಟುಂಬದ ನೀತಿ, ಧರ್ಮ ಹಾಗೂ ಸದಾಚಾರ. ಸದಾಚಾರ ಇಲ್ಲದ ಕುಟುಂಬವು ಮಗುವಿನ ಬದುಕಿಗೆ ಮಾರಕವಾಗುತ್ತದೆ; ಯಾವ ಆದರ್ಶವನ್ನು ಕೊಡುವುದಿಲ್ಲ. ಹೀಗಾಗಿ ಆದರ್ಶ ಕೊಡದ ಕುಟುಂಬವು ಮಗುವಿನ ಭವಿಷ್ಯದ ಬದುಕಿಗೆ, ಚುಕ್ಕಾಣಿ ಇಲ್ಲದ ನಾವೆಯಂತಾಗುತ್ತದೆ. ಯಾವ ಕುಟುಂಬದಲ್ಲಿ ಸಚ್ಚಾರಿತ್ರ್ಯ, ಸದಾಚಾರ, ಮೌಲ್ಯಗಳು, ಉತ್ತಮ ನಡೆನುಡಿಗಳು ಕಂಡುಬರುತ್ತವೆಯೋ ಅಂತಹ ಕುಟುಂಬದಿಂದ ಬಂದ ಮಕ್ಕಳು, ಉತ್ತಮ ಹೊಂದಾಣಿಕೆ, ಹೆಚ್ಚು ಸ್ವಾವಲಂಬಿಯಾಗುವಿಕೆ ಮತ್ತು ತಮ್ಮ ತಾಯಿತಂದೆಯವರೊಂದಿಗೆ ಪ್ರೇಮಪೂರ್ಣ ಮೈತ್ರಿಯನ್ನು ಪಡೆದವರಾಗಿರುತ್ತಾರೆ. ಯಾವ ಕುಟುಂಬದಲ್ಲಿ ಸಂಶಯ ಪ್ರವೃತ್ತಿ, ಹಗೆತನ, ದ್ವೇಷ ಮತ್ತು ಅಸೂಯೆಗಳು ಹೊಗೆಯಾಡುತ್ತವೆಯೋ ಅಂತಹ ಕುಟುಂಬದಿಂದ ಬಂದ ಮಕ್ಕಳು, ಕ್ರೌರ್ಯ, ದಬ್ಬಾಳಿಕೆ ಹಾಗೂ ಬಾಲಾಪರಾಧಿಯ ಗುಣಗಳನ್ನು ಪಡೆಯುತ್ತಾರೆ; ಸಮಾಜ ಕಂಟಕರಾಗುತ್ತಾರೆ. ಆದ್ದರಿಂದ ಕುಟುಂಬದ ಆದರ್ಶ ಹಾಗೂ ಸ್ವಚ್ಛ ಪರಿಸರವು ಮಗುವಿನ ವ್ಯಕ್ತಿತ್ವ ವಿಕಾಸದಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತದೆ.

ಕುಟುಂಬದ ಆರ್ಥಿಕ ಹಿನ್ನೆಲೆಯು ವ್ಯಕ್ತಿಯ ವಿಕಾಸದಲ್ಲಿ ಮತ್ತೊಂದು ಮೈಲಿಗಲ್ಲು. ಕಿತ್ತು ತಿನ್ನುವ ಬಡತನವು ಮಗುವಿನ ಮೂಲ ಅಗತ್ಯಗಳನ್ನು ಪೂರೈಸಲಾಗದ ಸ್ಥಿತಿಗೆ ತಳ್ಳಿ, ಮಗುವಿನಲ್ಲಿ ಹತಾಶೆಯನ್ನು ಮೂಡಿಸಬಲ್ಲದು. ಯಾವ ಕುಟುಂಬದಲ್ಲಿ, ತಾಯಿ-ತಂದೆಯರು ತಮ್ಮ ಮಕ್ಕಳ ಮೂಲ ಅಗತ್ಯಗಳನ್ನು ಈಡೇರಿಸುತ್ತಾರೋ, ಅಂತಹ ಮಕ್ಕಳು ಹಾದಿ ತಪ್ಪಿಹೋಗುವ ಅವಕಾಶಗಳು ಕಡಿಮೆ ಇರುತ್ತವೆ. ಮಕ್ಕಳ ಆಶೆ-ಆಕಾಂಕ್ಷೆಗಳು ಹತ್ತಾರು-ಹಲವಾರು. ಅವನ್ನೆಲ್ಲಾ ಈಡೇರಿಸಬೇಕೆಂದಲ್ಲ. ಕುಟುಂಬದ ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮಕ್ಕಳನ್ನು ತಾಯಿ-ತಂದೆಯ ನಂಬಿಕೆಗೆ ತೆಗೆದುಕೊಂಡು, ಅವರಲ್ಲಿ ಅರಿವು ಮೂಡಿಸಿ, ನೊಂದ ಜೀವಕ್ಕೆ ಭರವಸೆ ಕೊಡಬಲ್ಲ ಪರಿಸರವನ್ನು ಕುಟುಂಬದಲ್ಲಿ ನಿರ್ಮಿಸಿದರೆ, ಅಂತಹ ಮಕ್ಕಳಲ್ಲಿ ಆತ್ಮವಿಶ್ವಾಸವು ಬೆಳೆದು, ವ್ಯಕ್ತಿತ್ವ ವಿಕಾಸವಾಗಲು ಅನುವು ಮಾಡಿಕೊಟ್ಟಂತಾಗುತ್ತದೆ.

ಒಟ್ಟಾರೆ ಹೇಳುವುದಾದರೆ, ಮಗುವಿನ ವ್ಯಕ್ತಿತ್ವವು ಕುಟುಂಬದ ಒಂದು ಕೊಡುಗೆ. ಮಕ್ಕಳು ಮತ್ತು ತಾಯಿ-ತಂದೆಯರ ನಡುವೆ ಇರುವ ಮಧುರ ಬಾಂಧವ್ಯವು ಮಕ್ಕಳ ವ್ಯಕ್ತಿತ್ವ ಅರಳಲು ಪೋಷಕವಾಗುತ್ತದೆ.

(ಕೃಪೆ : ಚೆನ್ನಶಿಕ್ಷಣಸಿರಿ)

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು । ನನ ಕಂದ
ಜ್ಯೋತಿಯೇ ಆಗು ಜಗಕೆಲ್ಲ

# ಒಮ್ಮನ - ಒಮ್ಮಾನ

- ಟಿ. ಆರ್. ಮಹಾದೇವಯ್ಯ
೩೭೬, ೮ನೇ ಕ್ರಾಸ್, ಸಿದ್ಧಗಂಗಾ ಶುಭ ಸದನದ ಬಳಿ,
ಮಂಜುನಾಥ ನಗರ, ಬೆಂಗಳೂರು-೧೦

**ಒಮ್ಮನದಿ ಬಿತ್ತಕ್ಕು ಇಮ್ಮನದಿ ಜಳ್ಳಕ್ಕು**
**ಒಮ್ಮನದಿ ಮೋಕ್ಷವದು ಅಕ್ಕು**
**ಲೋಕವು ಇಮ್ಮನದಿ ಕೆಡುಗು ಸರ್ವಜ್ಞ.**

ಮನುಷ್ಯನ ಮನೋಲೋಕ ಬಹಳ ವಿಚಿತ್ರ. ಅಲ್ಲಿನ ರೀತಿ-ನೀತಿಗಳನ್ನು ಇಷ್ಟೆಂದು ಹೇಳುವುದು ಕಷ್ಟ. ಚಂಚಲತೆ ಮನಸ್ಸಿನ ಹುಟ್ಟುಗುಣ. ಪರಿದಾಡುವುದು ಅದರ ಸ್ವಭಾವ. ಈಗ ಇಲ್ಲಿರುವ ಮನ ಇನ್ನೊಂದು ಕ್ಷಣದಲ್ಲಿ ದೂರ ದೇಶದಲ್ಲಿ ಓಡಾಡಬಲ್ಲುದು. ಈಗ ಒಂದು ವಿಚಾರ ಕುರಿತು ಚಿಂತಿಸುವ ಮನ ಮರುಕ್ಷಣದಲ್ಲಿ ಬೇರೆ ಇನ್ನಾವುದೋ ವಿಚಾರಮಂಥನ ಕ್ಕಿಳಿದಿರುತ್ತದೆ. ಟೊಂಗೆಯಿಂದ ಟೊಂಗೆಗೆ ಹಾರುವ ಮಂಗನಂತೆ ಅದರ ಚಲನೆ. ಅದನ್ನು ಹತೋಟಿಯಲ್ಲಿಟ್ಟು ಏಕಮುಖಿವಾಗಿಸಿ ಸತ್ಪಾತ್ರದಲ್ಲಿ ಹರಿಸುವುದು ಒಂದು ತಪಸ್ಸೇ. ಇದಕ್ಕಾಗಿ ನಮ್ಮ ಧರ್ಮಗಳು ಅನೇಕ ವಿಧಿವಿಧಾನಗಳನ್ನು ಜನರ ಮುಂದಿರಿಸಿವೆ. ಮಂತ್ರಜಪ ಅವುಗಳಲ್ಲೊಂದು. ಹರಿದಾಡುವ ಮನವನ್ನು ಒಂದೆಡೆ ನಿಲ್ಲಿಸುವುದೇ ಮಂತ್ರದ ಉದ್ದೇಶ. "ಅತ್ತಲಿತ್ತ ಹರಿವ ಮನವ ಚಿತ್ತದಲಿ ನಿಲಿಸಬಲ್ಲಡೆ ಬಚ್ಚಬರಿಯ ಬೆಳಗು" ಎಂದಿದ್ದಾರೆ ಅನುಭಾವಿಗಳು. ಆದರೆ ಇದು ಸುಲಭದ ಕೆಲಸವಲ್ಲ. ಇದಕ್ಕೆ ನಿರಂತರ ಸಾಧನೆ ಬೇಕು.

ಅಂಥ ನಿರಂತರ ಸಾಧನೆ ಮಾಡಿದವರು ಮನವನ್ನು ನಿಯಂತ್ರಿಸಿ, ಅದ್ಭುತವನ್ನು ಸಾಧಿಸಿದ ನಿದರ್ಶನಗಳು ನಮ್ಮೆದುರು ಇವೆ. ಮನಸ್ಸು ಏಕವಾದರೆ ಅದು ಶಕ್ತಿ ಸಮನ್ವಿತವಾಗುತ್ತದೆ. ಅದು ತಪ್ಪದೆ ಕಾರ್ಯಸಾಧನೆ ಮಾಡುತ್ತದೆ. 'ಆತ ಮನಸ್ಸು ಮಾಡಬೇಕು. ಮಾಡಿದ್ದೇ ಆದರೆ ಅದು ಖಂಡಿತ ಸಾಧ್ಯ' ಎಂದು ಜನರಾಡುವ ಮಾತು ಮನಸ್ಸಿಗೆ ಎಂಥ ಅದ್ಭುತ ಶಕ್ತಿಯಿದೆ ಎಂಬುದನ್ನು ಸಾರುತ್ತದೆ. 'ಅವನದು ಎರಡು ಮನಸ್ಸು. ಅದಕ್ಕೆ ಕೆಲಸ ಆಗಲಿಲ್ಲ' ಎಂಬ ಅನುಭವಿಕರ ನುಡಿ ದುರ್ಬಲ ಮನದ ಸೋಲನ್ನು ಮನವರಿಕೆ ಮಾಡುತ್ತದೆ.

'ಒಮ್ಮನದಿಂದ ಬೀಜ, ಇಮ್ಮನದಿಂದ ಜಳ್ಳು' ಎಂಬ ಸರ್ವಜ್ಞನ ಮಾತು ಒಮ್ಮನ - ಒಂದು ಮನಸ್ಸು ಗಟ್ಟಿ, ದೃಢ. ಆದ್ದರಿಂದ ಸತ್ವಪೂರ್ಣ; ಫಲಕಾರಿ. ಇಮ್ಮನ ಅಂದರೆ ಎರಡು ಮನಸ್ಸು ಸಂಶಯಗ್ರಸ್ತ, ವಿಸ್ವಾಸರಹಿತ. ಅಂತೆಯೇ ದುರ್ಬಲ. ಪರಿಣಾಮ ಜಳ್ಳು, ನಿಷ್ಫಲವೆನಿಸುತ್ತದೆ. ಮುಂದುವರಿದು ಸರ್ವಜ್ಞ ಒಮ್ಮನದಿಂದ ಮೋಕ್ಷ ದೊರಕುತ್ತದೆ ಎಂದೂ ಇಮ್ಮನದಿಂದ ಲೋಕ ಕೆಡುತ್ತದೆ ಎಂದೂ ಸಾರಿದ್ದಾನೆ.

ಎರಡು ಮನವುಳ್ಳ ವ್ಯಕ್ತಿ ಎರಡು ಮೊಲಗಳನ್ನು ಒಡಿಸಿಕೊಂಡು ಹೋದ ಬೇಟೆಗಾರ ಒಂದೂ ದೊರಕದೆ ನಿರಾಶನಾಗುವಂಥ ಸ್ಥಿತಿಯನ್ನು ಮುಟ್ಟುತ್ತಾನೆ. ಆದ್ದರಿಂದ ಮನಸ್ಸನ್ನು ಏಕಮುಖಿವಾಗಿಸಿ ಕಾರ್ಯ ಸಾಧಿಸಬೇಕು. ಬಸವಣ್ಣನವರು ತಮ್ಮ ವಚನವೊಂದರಲ್ಲಿ ಮಾನವನ ಮನವನ್ನು ಕುರಿತು ಪ್ರಸ್ತಾಪ ಮಾಡಿದ್ದಾರೆ.

ದೇವ ಮತ್ತು ಭಕ್ತ ಇಬ್ಬರನ್ನೂ ವ್ಯಾಪಾರಿ ಮತ್ತು ಗಿರಾಕಿಯರಿಗೆ ಹೋಲಿಸಿ ವ್ಯಾಪಾರ ಗಿಟ್ಟುವುದು ಯಾವಾಗ ಎಂಬುದನ್ನು ದೃಷ್ಟಾಂತಪೂರ್ವಕವಾಗಿ ಮನಗಾಣಿಸುವ ಸಂದರ್ಭದಲ್ಲಿ ಒಮ್ಮನ-ಒಮ್ಮನದ ಬಗ್ಗೆ ಪರಿಣಾಮಕಾರಿಯಾದ ರೀತಿಯಲ್ಲಿ ಪ್ರಸ್ತಾಪಿಸಿದ್ದಾರೆ :

**ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ**
**ಹರದ ಕುಳ್ಳಿರ್ದ ನಮ್ಮ ಮಹದೇವ ಸೆಟ್ಟಿ ।**
**ಒಮ್ಮನವಾದರೆ ಒಡನೆ ನುಡಿವನು**
**ಇಮ್ಮನವಾದರೆ ನುಡಿಯನು**
**ಕಾಣಿಯ ಸೋಲ, ಅರ್ಧಗಾಣಿಯ ಗೆಲ್ಲ**
**ಜಾಣ ನೋಡವ್ವ, ನಮ್ಮ ಕೂಡಲಸಂಗಮದೇವ.**

ಶಿವ ಒಬ್ಬ ಜಾಣ ವ್ಯಾಪಾರಿ. ಈ ಜಗತ್ತಿನ ಅಂಗಡಿ ತೆರೆದು ವ್ಯಾಪಾರ ಮಾಡಲು ಕುಳಿತಿದ್ದಾನೆ. ಅವನೊಡನೆ ವ್ಯವಹರಿಸುವ ಗಿರಾಕಿಗಳು ಒಂದೇ ಮನಸ್ಸಿನಿಂದ ಒಂದು ಮಾನ(ಅಳತೆ) ಕೇಳಿದರೆ ತಕ್ಷಣ ಕೊಡುತ್ತಾನೆ. ಎರಡು ಮನಸ್ಸಿನಲ್ಲಿ ಎರಡು ಮಾನ ಕೇಳಿದರೆ ಕೊಡುವುದಿಲ್ಲ. ಕೊಟ್ಟ ದುಡ್ಡಿಗೆ ಸರಿದೂಗುವ ಸರಕನ್ನು ಕೊಡುವ ವ್ಯವಹಾರ ಕುಶಲಿ ಆತ. ಒಂದು ಅಳತೆಯ ಹಣ ಕೊಟ್ಟು ಎರಡು ಅಳತೆಯ ಸರಕು ಬೇಕು ಎಂದರೆ ಹೇಗೆ? ಇಂಥ ದುರಾಸೆ ಸಲ್ಲದು. ಈ ಸೆಟ್ಟಿಯದು ಕಟ್ಟುನಿಟ್ಟಾದ ವ್ಯಾಪಾರ. ಆತ ಒಂದು ಕಾಸನ್ನು ಸೋಲುವುದಿಲ್ಲ; ಅರ್ಧಕಾಸನ್ನು ಗೆಲ್ಲುವುದೂ ಇಲ್ಲ. ಒಮ್ಮನಸ್ಸಿನಿಂದ ಕೇಳಿದರೆ ಸಾಕು; ತಕ್ಷಣವೇ ಮೋಕ್ಷವೆಂಬ ಸರಿಯಾದ ಅಳತೆಯ ಸರಕನ್ನು ಕೊಟ್ಟುಬಿಡುತ್ತಾನೆ. ಎರಡು ಮನಸ್ಸಿನಲ್ಲಿ ಕೇಳಿದರೆ ಆತ ಕೊಡುವುದಿಲ್ಲ. ಅಂಥ ಲೆಕ್ಕಾಚಾರ ದೇವನಲ್ಲಿದೆ. ಆತ ದುಡಿದಷ್ಟು ಪಡಿ ನೀಡುವ ಸಮತೋಲನ ವಿತರಣ ಜಾಣ. ಆದ್ದರಿಂದ ಗ್ರಾಹಕರು ಬುದ್ಧಿವಂತರಾಗಬೇಕು. ಏಕಮನದಿಂದ ಒಂದು ಮಾನವನ್ನೇ ಕೇಳಬೇಕು. ಜೀವನು ದೇವನಾಗುವ ವ್ಯವಹಾರ ರೀತಿ ಇದು ಎಂದು ಅಣ್ಣ ಸೂಚಿಸಿದ್ದಾರೆ.

ಭಗವದನುಗ್ರಹ ಸಂಪಾದನೆ ಮಾಡುವ ವ್ಯವಹಾರ ಅಷ್ಟು ಸುಲಭದ್ದಲ್ಲ. ಅದಕ್ಕೆ ಮುಖ್ಯವಾಗಿ ಬೇಕಾದ ಬಂಡವಾಳ ಏಕಮನ; ದುರಾಸೆಯಿಲ್ಲದ ನಿರಾಳಮನ. ಆಗ ವ್ಯಾಪಾರ ಸುಲಭ. ಅದರಿಂದ ದೊರಕುವುದು ಮುಕ್ತಿಯ ದೊಡ್ಡಲಾಭ!

ಈ ಲಾಭ-ನಷ್ಟದ ವ್ಯವಹಾರವನ್ನೇ ಸರ್ವಜ್ಞನು ಗಟ್ಟಿಕಾಳು ಮತ್ತು ಜಳ್ಳುಕಾಳುಗಳ ವ್ಯಾಪಾರವಾಗಿ ಪ್ರಸಾದಿಸಿದ್ದಾನೆ. ಒಮ್ಮನದಿಂದ ದೇವನಲ್ಲಿ ಮೊರೆಯಿಟ್ಟರೆ ಆತ ಫಲ ನೀಡುತ್ತಾನೆ. ಇಲ್ಲದೆ ಇಬ್ಬಂದಿ ಮನಸ್ಥಿತಿಯಲ್ಲಿ ಕೇಳಿದರೆ ಆತ ಜಳ್ಳನ್ನು ಕೊಡುತ್ತಾನೆ. ಇದನ್ನರಿಯದೆ ಲೋಕದ ಜನ ಇಮ್ಮನದಿಂದ ಕೊಟ್ಟು ಹೋಗುತ್ತಿದ್ದಾರಲ್ಲಾ ಎಂದು ಸರ್ವಜ್ಞ ಪರಿತಪಿಸಿದ್ದಾನೆ.

ಮನಸ್ಸಿನ ವ್ಯಾಪಾರವನ್ನು ಚೆನ್ನಾಗಿ ಬಲ್ಲ ಅಕ್ಕಮಹಾದೇವಿ ಜಾಣೆಯಾಗಿ ದೇವನಲ್ಲಿ ಹೀಗೆ ನಿವೇದಿಸಿದ್ದಾಳೆ. **'ಎನಗುಳ್ಳುದೊಂದು ಮನ. ಅದನ್ನು ನಿನಗೆ ಅರ್ಪಿಸಿದ ಮೇಲೆ ನನಗೆ ಎತ್ತಣ ಚಿಂತೆ?'** ಭಗವದನುಗ್ರಹವನ್ನು ಪಡೆಯುವ ಸರಳಮಾರ್ಗವನ್ನು ಆಕೆ ಕಂಡುಕೊಂಡದ್ದು ಹೀಗೆ! ವಿಶ್ವಾಸದಿಂದ, ದೃಢಸಂಕಲ್ಪದಿಂದ ದೇವನಿಗೆ ಅರ್ಪಿಸಿದ ಮನ ತನ್ನಲ್ಲ ಕೀಳರಿಮೆಯನ್ನು ಕಳೆದುಕೊಂಡು ಶುದ್ಧವಾಗುತ್ತದೆ; ಪಾವನವಾಗುತ್ತದೆ. ಅದರಿಂದ ಯಾವ ಪಾಪವೂ ಘಟಿಸದು. ಪರಿಣಾಮವಾಗಿ ಶಾಂತಿ, ನೆಮ್ಮದಿ ಶತಸ್ಸಿದ್ಧ. ಬಾಳಲ್ಲಿ ಜಳ್ಳನ್ನು ತೂರಿ ಗಟ್ಟಿಕಾಳನ್ನು ಪಡೆಯುವ ಪರಿ ಇದು.

## ಶ್ರೀಶ್ರೀಗಳವರ ವಿಚಾರಧಾರೆ

### ಹೆಣ್ಣು : ಅಂದು - ಇಂದು

ಹೆಣ್ಣು ಕುಟುಂಬದ ಕಣ್ಣು. ಅವಳು ಒಳ್ಳೆಯವಳಿದ್ದು ತನ್ನ ಮಕ್ಕಳನ್ನು ಒಳ್ಳೆಯವರನ್ನಾಗಿ ಬೆಳೆಸಿದರೆ ಆ ಕುಟುಂಬ ಹಸನಾಗುತ್ತದೆ. ಒಂದೊಂದು ಕುಟುಂಬವೂ ಹಸನಾದರೆ ಸಮಾಜ ಹಸನಾಗುವುದು ಎಷ್ಟು ಹೊತ್ತು?

ಮೊದಲಿಗೆ ಹೆಣ್ಣು ತನ್ನ ಹೊಣೆಗಾರಿಕೆಯನ್ನು ಅರಿಯಬೇಕು. ಯಾವುದನ್ನು ಮಾಡಿದರೆ ತನಗೆ ತನ್ನ ಇಡೀ ಕುಟುಂಬಕ್ಕೆ ಲೇಸಾಗುತ್ತದೆ ಎಂಬುದನ್ನು ಕಂಡುಕೊಂಡು, ಅದರಂತೆ ನಡೆದರೆ ಪ್ರಗತಿ ಖಂಡಿತ. ಹೆಣ್ಣು ಸಹನೆಗೆ, ತ್ಯಾಗಕ್ಕೆ ಬೇರೊಂದು ಹೆಸರು. ತನಗಿಲ್ಲದಿದ್ದರೂ ತನ್ನ ಗಂಡನಿಗೆ ಮಕ್ಕಳಿಗೆ ನೀಡುವ ಆಕೆಯ ತ್ಯಾಗಗಳು ಸಣ್ಣವಲ್ಲ. ನಾಡು ನುಡಿಯನ್ನು ಕಟ್ಟುವ ಮುಂದಿನ ಪೀಳಿಗೆಯನ್ನು ಬೆಳೆಸುವಾಗ ಆಕೆ ನಿರ್ವಹಿಸಬೇಕಾದ ಜವಾಬ್ದಾರಿ ಚಿಕ್ಕದೇನಲ್ಲ, ಆಕೆ ಮಾಡುವ ಸೇವೆ ಯಾವ ದೇಶಭಕ್ತನ ಸೇವೆಗಿಂತಲೂ ಕಡಿಮೆಯದಲ್ಲ.

ಸಜ್ಜನರು ಸಹಜವಾಗಿ ನುಡಿದುದು ಕಲ್ಲಿನ ಮೇಲೆ ಬರೆದಷ್ಟು ಶಾಶ್ವತವಾಗಿ ಉಳಿಯುತ್ತದೆ. ಆದರೆ ದುರ್ಜನರು ಆಣೆಮಾಡಿ ಸಾರಿ ಹೇಳಿದರೂ ಕೂಡ ಅವರ ಮಾತು ನೀರಮೇಲಿನ ಬರಹದೋಪಾದಿ ಆಗುವುದು.

— ಸುಭಾಷಿತ

# ಅರವತ್ತುಮೂರು ಪುರಾತನ ಶರಣರು

(ಕಳೆದ ಸಂಚಿಕೆಯಿಂದ)



- ಡಾ. ಬಿ.ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ, ಬೆಂಗಳೂರು.

## ೩೨. ವಾಗೀಶರು

ತಮಿಳು ನಾಡಿನ ತಿರುವಾಯೂರಿನ ರಾಜನವುಗನಾದ ಧರ್ಮಶೇಖರ ಬ್ರಾಹ್ಮಣನ ಅವತಾರವೆಂದೇ ಖ್ಯಾತಿ ಪಡೆದಿದ್ದ. (ಕೆಲವೆಡೆ ಮಧುರಾನಗರದ ಜಿನಮುನಿ ಧರ್ಮಶೇಖರ ಹಲವು ಶಿಷ್ಯರನ್ನು ಪಡೆದಿದ್ದ ಎಂದಿದೆ.) ಆತನ ಅಕ್ಕ ತೆಲ್ಲವಲ್ಲ ನಾಚಿ (ತಿಲ್ಲವಲ್ಲ ನಾಚಿ) ತಿರುವರಿಫೆ ಎಂಬಲ್ಲಿ ಶಿವಪೂಜೆಮಾಡುತ್ತಾ ತನ್ನ ತಮ್ಮನಿಗೆ ಒಳ್ಳೆ ಬುದ್ಧಿ ಕೊಟ್ಟು ಶಿವಭಕ್ತನನ್ನಾಗಿ ಪರಿವರ್ತಿಸೆಂದು ಬೇಡುತ್ತಿದ್ದಳು. ಸೋಮೇಶ್ವರನಲ್ಲಿ ಈಕೆಯ ಪ್ರಾರ್ಥನೆ ಕೇಳಿ ವಾಗೀಶರಿಗೆ ಹೊಟ್ಟೆಶೂಲ ಕೊಟ್ಟು ಯಾವ ವೈದ್ಯರಿಂದಲೂ ವಾಸಿಯಾಗದಿರಲು ಧರ್ಮಶೇಖರ ತಮ್ಮ ಶಿಷ್ಯರನ್ನು ಕರೆದು ನನ್ನನ್ನು ನನ್ನ ಅಕ್ಕನ ಊರಿಗೆ ಕರೆದುಕೊಂಡು ಹೋಗಿ ಬಿಡಿ ಎಂದ. ಶಿಷ್ಯರು ಆತನನ್ನು ಕಂದಾಪುರದ ದೇವಾಲಯದ ಮುಂದೆ ತಂದಿರಿಸಿದರು. ಅವನ ಅಕ್ಕನಲ್ಲಿ ಬಂದು ತಿಳಿಸಿದರು.

"ಆತ ಜಿನ ನಾನು ಅವನನ್ನು ನೋಡಲಾರೆ" ಎಂದಾಗ ಆತನ ಕಡೆಯವರು "ಈಗ ಅವರು ಸೋಮನಾಥನ ದೇವಾಲಯದ ಮುಂದಿದ್ದಾರೆ ಈಗ ಬದಲಾಗಿದ್ದಾರೆ" ಎಂದರು.

"ಆತನಿಗೆ ವಿಭೂತಿ ಧಾರಣೆ ಮಾಡಿ, ಹಾಗಾದರೆ ಮಾತ್ರ ಬಂದು ನೋಡುವೆ" "ಆಗಲಿ" ಎಂದು ಹೇಳಿ ಅವನ ಅಂಗಾಂಗಗಳಿಗೆ ಭಸ್ಮ ಧರಿಸಿದರು. ಆತನ ನೋವು ಸಂಪೂರ್ಣ ವಾಸಿಯಾಯ್ತು. ಶಿವಶಿವ ಎನ್ನಲು ಪ್ರಾರಂಭಿಸಿದ. ದೇವಾಲಯಕ್ಕೆ ನಡೆದ ಶಿವಾರ್ಚನೆ ಮಾಡಲು. ಅನಂತರ ಅಕ್ಕ ಆತನಿಗೆ ದರ್ಶನ ನೀಡಲು ಅನುಮತಿ ನೀಡಿದಳು. ಆತ ಅಕ್ಕನಿಗೆ ಬಂದು ನಮಸ್ಕರಿಸಿದ. ಶಿವನ ಪೂಜಿಸುತ್ತಾ ವಾಗೀಶರೆಂಬ ಹೆಸರಿನಿಂದ ಇರಲಾರಂಭಿಸಿದ.

ಮಧುರಾಪಟ್ಟಣದ ಜನರು ಈ ವಿಷಯ ಕೇಳಿ ಕೋಪೋದ್ರೇಕರಾದರು. ಊರಿಗೆ ಕರೆದು. ಆತ ಬರದಿರಲು ಒಪ್ಪದಿರಲು, ಬಲತ್ಕಾರದಿಂದ ಕರೆದುಕೊಂಡು ಹೋಗಿ ಮಧುರಾಪುರದ ಬಸದಿಯಲ್ಲಿ ಕುಳ್ಳಿರಿಸಿ, "ನೀವು ಪಂಡಿತರಾಗಿದ್ದು ಹೀಗೆ ಮತಾಂತರ ಹೊಂದಬಹುದೇ?" ಎಂದು ಪ್ರಶ್ನಿಸಿದರು. ಅದಕ್ಕೆ ಉತ್ತರವಾಗಿ ಆತ, "ನಮಃ ಶಿವಾಯ" ಎಂದ.

ಆತನನ್ನು ಕರೆದುಕೊಂಡು ಹೋಗಿ ಸರ್ಪದಿಂದ ಕಚ್ಚಿಸಿದರು. ಏನೂ ಆಗಲಿಲ್ಲ. ಆನೆಯಿಂದ ತುಳಿಸಿದರು. ಅಪಾಯವಾಗಲಿಲ್ಲ, ನಮಃ ಶಿವಾಯ ಎಂದ ಕೂಡಲೇ ಎಲ್ಲರೂ ನಮಸ್ಕರಿಸಿದರು.

ಅಲ್ಲಿಂದ ತಿರುವಲ್ಲೂರಿಗೆ ಬರುತ್ತಿರಲು ಒಬ್ಬ ಕುಷ್ಠರೋಗಿ ನಮಸ್ಕರಿಸಿದ. ಆತನ ಭಕ್ತಿಗೆ ಮೆಚ್ಚಿ 'ತಿರಿನಾವುಕ' ಎಂದು ಹೆಸರಿಟ್ಟು ಕಪಟ ರೋಗಿ ಅಂತರ್ಧಾನನಾದ. ತಿರಿವರಿಗೆಗೆ ಬಂದು ಸೋಮ ಲಿಂಗವನ್ನು ಪೂಜಿಸುತ್ತಾ ಹಾಡುತ್ತಾ ಕಾಲ ನೂಕಲಾರಂಭಿಸಿದ.

ಒಂದು ದಿನ ತಿರುನಾವುಕರು ಒಬ್ಬ ಭಕ್ತ ತಂದ ಕೆಂಪು ಕಣದ ಹೂವುಗಳನ್ನು ಪೂಜಲು ಹೋಗಲು "ಪೂಜಿಸಬೇಡ" ಎಂದಂತಾಯಿತು.

"ದೇವ ನೀನು ಹೀಗೆಂದ ಮೇಲೆ ನಾನಿರುವುದಾದಾರೂ ಹೇಗೆ?" ಎಂದು ಪರಿಪರಿಯಾಗಿ ಬೇಡಲು ಶಂಕರ ಕರುಣೆಯಿಂದ ಭಸಿತ ಧರಿಸಿ, ದೀಕ್ಷೆ ಮಾಡಿದ. ಹೀಗೆ ಸೋಮನಾಥನ ಪೂಜೆಮಾಡುತ್ತಾ ಲಿಂಗೈಕ್ಯನಾಗಿ ಶಿವಸಾಯುಜ್ಯ ಪಡೆದ.

## ೩೩. ಪಿಳ್ಳೈನಯನಾರು (ತಿರುಜ್ಞಾನಸಂಬಂಧಿಗಳ್)

ಒಮ್ಮೆ ನಾರದರು ಭೂಲೋಕ ಸುತ್ತಿ ಕೈಲಾಸಕ್ಕೆ ಬರಲು ಈಶ್ವರನು ಭೂಲೋಕದ ವಿಚಾರವೇನು ಎಂದು ಕೇಳಲು, "ಪಾಂಡ್ಯ ರಾಜ್ಯದಲ್ಲಿ ಜನರು ಶಿವನ ನಿಂದಕರಾಗಿದ್ದಾರೆ, ಜಿನದೇವರೇ ದೊಡ್ಡವನೆಂದು ವಾದಿಸುತ್ತಿದ್ದಾರೆ." ಆಗ ಶಿವ ಷಣ್ಮುಖನನ್ನು ಉದ್ದೇಶಿಸಿ, "ನೀನು ಭೂಲೋಕದಲ್ಲಿ ಹುಟ್ಟಿ ಶಿವ ಧರ್ಮವನ್ನು ವಿಸ್ತರಿಸಿ ಬಾ" ಎನ್ನಲು ಆಗಲೆಂದು ಚೋಳಮಂಡಲದ ಕಾವೇರಿತೀರದ ಚಿಯೋಳ (ಶೀಯಾಳ) ಶಿಯಾಳೀಪುರ ಎಂಬ ಪುರದಲ್ಲಿ ಮಾಹೇಶ್ವರಭಟ್ಟ, ಮಾದೇವಿ ಎಂಬ ಬ್ರಾಹ್ಮಣ ಶಿವ ಭಕ್ತರಿಗೆ ಸಂಸರ್ಗವಿಲ್ಲದೆ ಜನಿಸಿದ ಮಗು ಹುಟ್ಟಿದ ಕ್ಷಣ ಮಾದೇವಿ ತೀರಿಕೊಂಡಳು. ಮಗುವಿಗೆ ಪಿಳ್ಳೈ ನೈನಾರನೆಂದು ನಾಮಕರಣ ಮಾಡಿದರು. ತಂದೆಯೇ ಮಗುವನ್ನು ಜೋಪಾನದಿಂದ ಸಾಕಲಾರಂಭಿಸಿದ.

ಒಂದು ದಿನ ಮಾಹೇಶ್ವರ ಭಟ್ಟ ಕಾವೇರಿ ನದಿಯಲ್ಲಿ ಸ್ನಾನ ಮಾಡಲು ಮಗುವನ್ನು ಮರದ ಕೆಳಗೆ ಮಲಗಿಸಿ ಹೋದ. ಮಗು ಅಳುತ್ತಿತ್ತು. ಪಾರ್ವತಿ ಆ ದನಿಯನ್ನು ಕೇಳಿ ಆ ಮಗುವನ್ನು





ಷಣ್ಮುಖನೆಂದು ತಿಳಿದು, ಮಗುವಿಗೆ ಅಮೃತ ಕುಡಿಸಿ, ಒಂದು ಚಿನ್ನದ ಬಚ್ಚಲನ್ನು ಕೊಟ್ಟು ಕಿವಿಯಲ್ಲಿ ಕರ್ಣಕುಂಡಲವಿಟ್ಟು, ಅಂತರ್ಧಾನಳಾದಳು. ಇದನ್ನು ನೋಡಿ ತಂದೆ, "ಇದಾರು ಹಾಲು ಕುಡಿಸಿ ಇಷ್ಟೆಲ್ಲಾ ಕೊಟ್ಟು ಹೋದರು?" ಎಂದ ಮಗು ನುಡಿಯಿತು, "ನಾನು ಶಿವನಾಣತಿಯಿಂದ ಬಂದ ಷಣ್ಮುಖ, ತಾಯಿ ಪಾರ್ವತಿ ಹಾಲು ಕುಡಿಸಿ, ಇಷ್ಟೆಲ್ಲಾ ಇಟ್ಟು ಹೋದಳು" ಎಂದು. ಮಗು ಪಟ್ಟಣವನ್ನೆಲ್ಲಾ ಅರಣ್ಯವಾಗುವಂತೆ ಒಂದು ಪವಾಡ ಮಾಡು, ಎನ್ನಲು ಹಾಗೆಯೇ ಮಾಡಿದ. "ಮೊದಲಿನಂತೆ ಮಾಡು" ಎನ್ನಲು ಮೊದಲಿನಂತೆ ಪಟ್ಟಣ ಮಾಡಿದ. ಮಗುವಿನ ಜ್ಞಾನವನ್ನು ನೋಡಿ, ತಿರುಜ್ಞಾನ ಸಂಬಂಧಿಗಳ್ ಎಂದು ನಾಮಕರಣಮಾಡಿದ. ಈತ ತಿರುಪಾಡುಗಳನ್ನು ಹಾಡಿ ಶಿವನನ್ನು ಆನಂದಗೊಳಿಸುತ್ತಿದ್ದ.

ಒಂದು ದಿನ ತಿರುಜ್ಞಾನಸಂಬಂಧಿಗಳ್ ಆಕಾಶ ಮಾರ್ಗವಾಗಿ ತತ್ಕಾಲೂರಿಗೆ ಬಂದ. ಅಲ್ಲಿ ಸಿಂಗನೆಂಬ ಒಬ್ಬ ಭಕ್ತ ಆತನ ಮನೆಗೆ ಬರಬೇಕು ಎಂದು ಬೇಡಿಕೊಂಡ. ಆತನ ಮನೆಗೆ ಹೋಗಲು ಸಿಂಗನು ತಿರುಜ್ಞಾನಿಗಳನ್ನು ಸತ್ಕಾರ ಮಾಡಿದ. ತನ್ನ ಮಗಳಿಗೂ ತನ್ನ ಹೆಸರಿಟ್ಟು ಸಂತೋಷವಾಗಿದ್ದ. ಒಂದು ವರ್ಷದಲ್ಲೇ ಮಗುವನ್ನು ಯಮನು ಕರೆದೊಯ್ದ. ಸಿಂಗ, ತಿರುಜ್ಞಾನಸಂಬಂಧಿಗಳ್ ಹತ್ತಿರ ಬಂದು ಅವಳ ಆಸ್ತಿಯನ್ನೆಲ್ಲಾ ಅವರ ಮುಂದಿಟ್ಟು ಈಕೆಯನ್ನು ಬದುಕಿಸಿಕೊಡಿ ಎಂದು ಬೇಡಿದ. ತಿರುಜ್ಞಾನಿಗಳು ತಾಳದೊಂದಿಗೆ ತಿರುಪಾಡುಗಳನ್ನು ಹಾಡುತ್ತಾ "ಯಮಧರ್ಮನೇ ಈತನ ಕನ್ನೆಯ ಪ್ರಾಣದಾನ ನೀಡು" ಎಂದ ಕೂಡಲೇ ಮಗುವಿಗೆ ಪ್ರಾಣ ಬಂತು. ಕೂಡಲೇ ಆತನ ಮಗಳು ಎದ್ದು ಕುಳಿತಳು. ಎಲ್ಲರಿಗೂ ಆಶ್ಚರ್ಯವಾಯಿತು.

ಮುತ್ತಿನ ಮಂಟಪವೇರಿ ಕಾವೇರಿ ನದಿಯನ್ನು ಹರಿಗೋಲಿಲ್ಲದೆ, ತಿರುಪಾಡುಗಳನ್ನು ಹಾಕುತ್ತಾ ಪಾಂಡ್ಯ ಮಂಡಲಕ್ಕೆ ಬಂದರು. ಅಲ್ಲಿನ ದೇವಾಲಯವೊಂದು ಮುಚ್ಚಿರಲು, ತಿರುಜ್ಞಾನರು ಹಾಡಲು ಬಾಗಿಲು ತೆರೆಯಿತು. ಲಿಂಗಕ್ಕೆ ಶಾಸ್ತ್ರೀಯವಾಗಿ ಪೂಜಿಸಿ ಹಾಡುತ್ತಿರಲು, ಇದನ್ನು ನೋಡಿದ ಜೈನನೊಬ್ಬ ಸಹಿಸಲಾರದೆ ಮಧುರೆಯ ಸವಣರಿಗೆ ಹೋಗಿ ತಿಳಿಸಿದ.

"ತಿರುಜ್ಞಾನ ಸಂಬಂಧಿಗಳೆಂಬುವರು ಶಿವಾಲಯವನ್ನು ತೆರೆದು ಬಸದಿಯ ಪೂಜೆಯನ್ನು ಕೆಡಿಸುತ್ತಿದ್ದಾರೆ" ಎನ್ನಲು ಜೈನರೆಲ್ಲಾ ಕೂಡಿ ಪಾಂಡ್ಯರಾಜನಲ್ಲಿ ಈ ವಿಷಯವನ್ನು ತಿಳಿಸುತ್ತಾರೆ. ಆಗ ರಾಜ "ಇದಕ್ಕೆ ಸೈನ್ಯ ಕಳುಹಿಸಬೇಕೇ? ಸರಿಯಿಲ್ಲವೆನಿಸುತ್ತದೆ" "ಇಲ್ಲ ಪ್ರಭು ಕಳುಹಿಸಬೇಕು"

ಎಂದು ಹಠಹಿಡಿಯಲು ರಾಜ ಸೈನ್ಯವನ್ನು ಕಳುಹಿಸಿದ. ಈ ವಿಷಯವನ್ನು ತಿಳಿದ ತಿರುಜ್ಞಾನ ಸಂಬಂಧಿಗಳು ಶಿವನಲ್ಲಿ ಭಿನ್ನವಿಸಿಕೊಂಡರು. "ಅವನ ಸೈನ್ಯವನ್ನು ಕೊಲ್ಲಬೇಕು" ಎಂದು "ನನ್ನ ಮಗನನ್ನು ಕೊಲ್ಲಲು ಬರುವ ಶತ್ರುಗಳ ಶಿರಚ್ಛೇದನ ಮಾಡಿ ಬಾ" ಎಂದು ಚಕ್ರವೊಂದನ್ನು ಕಳುಹಿಸಿದ. ಅದು ಎಲ್ಲಾ ಸವಣರ ಶಿರ ಛೇದನ ಮಾಡಿ ಶಿವಾಲಯಕ್ಕೆ ಬಂತು. ಕೂನಪಾಂಡ್ಯ ರಾಜನಿಗೆ ಈ ವಿಷಯ ತಿಳಿದು ಭೀತನಾದ ಮುತ್ತಿನ ಮಂಟಪದಲ್ಲಿ ಕುಳಿತು ಮಧುರಾಪುರಕ್ಕೆ ತಿರುಜ್ಞಾನಿಗಳು ಬಂದರು. ಜೈನರೆಲ್ಲಾ ಶಿವಾಲಯಕ್ಕೆ ಬಂದು ಶಿವನನ್ನು ಪೂಜಿಸಿದರು. ಕೂನ ಪಾಂಡ್ಯನಿಗೆ ಎಲ್ಲರೂ ಜೈನರಾಗ ಬೇಕೆಂಬ ಆಸೆ. ಈತನ ಆಸ್ಥಾನದಲ್ಲಿ ಕಲಿಚ್ಛರಿಯರೆಂಬ ಶಿವಭಕ್ತರಿದ್ದರು. ಪಾಂಡ್ಯ ರಾಜನ ಪಟ್ಟದ ರಾಣಿ ಶಿವಭಕ್ತಿಯುಳ್ಳವಳೇ ಆಗಿದ್ದಳು. ರಾಜನಿಗಂಜಿ ಗುಪ್ತವಾಗಿ ಶಿವಪೂಜೆಯನ್ನು ಮಾಡುತ್ತಿದ್ದಳು.

ಅವಳು ಬಂದು "ನಿಮ್ಮಿಂದ ಜೈನರ ಸಂಕಟ ಪರಿಹಾರವಾಗಬೇಕು" ಎಂದು ವಸ್ತ್ರಾಭರಣವಿತ್ತು ತಿರುಜ್ಞಾನರನ್ನು ಬೇಡಿದಳು. ಹನ್ನೊಂದು ಸಾವಿರ ಜೈನರು ಮಧುರಾಪುರಕ್ಕೆ ಬಂದು ರಾಜನಲ್ಲಿ ಮತ್ತೆ ನಿವೇದಿಸಿಕೊಂಡರು. "ತಿರುಜ್ಞಾನ ಸಂಬಂಧಿಗಳ ಮದಾಂಧತೆಯ ನಿರ್ಮೂಲನೆ ಮಾಡಬೇಕು"

"ಹೇಗಾದರೂ ಮಾಡಿ" ಎಂದ ರಾಜ

ಶಿವಾಲಯಕ್ಕೆ ಬೆಂಕಿ ಹಚ್ಚಿದರು. ಇದರಿಂದ ಶಿವಭಕ್ತರು ಭ್ರಾಂತರಾದರು. ಆಗ ಭಯ ಬೇಡಿ ಎಂದು, ತಿರುಜ್ಞಾನ ಸಂಬಂಧಿಗಳು ಹಾಡಲಾರಂಭಿಸಿದರು. ಅಗ್ನಿದೇವನ ಕರೆದು ಜೈನರ ಬಸದಿಗಳನ್ನೆಲ್ಲಾ ಸುಡಲು, ಜೈನರು ಕಟ್ಟೆವಲ್ಲಾ ಎಂದು ರೋದಿಸಲಾರಂಭಿಸಿದರು. ಅಗ್ನಿದೇವನನ್ನು ಕೂನ ಪಾಂಡ್ಯನ ಶರೀರದಲ್ಲಿ ಜ್ವರದ ರೂಪಿನಲ್ಲಿ ತಾಪ ಉಂಟುಮಾಡೆಂದು ಕಳುಹಿಸಿದರು. ತಿರುಜ್ಞಾನ ಸಂಬಂಧಿಗಳು ರಾಜನಿಗೆ ಹಾಗಾಯೇ ಮಾಡಲು ತಾಪವನ್ನು ತಾಳಲಾರದೆ ಹೊರಳಾಡಿದ. ಯಾವ ವೈದ್ಯ ಮಾಂತ್ರಿಕನಿಂದಲೂ ಏನೂ ಪರಿಹರಿಸಲಾಗಲಿಲ್ಲ. ಮಹಾರಾಣಿ ಚಿಕ್ಕಲಿಂಗ ನಯನಾರರ ಮಂದಿರದಲ್ಲಿರುವ ತಿರುಜ್ಞಾನಿ ಸಂಬಂಧಿಗಳಿಂದ ಸಾಧ್ಯವಾಗುವುದು ಎಂದಳು. ರಾಜ ಹಾಗಾಯೇ ಮಾಡಿ ಎಂದ. ಮಹಾರಾಣಿ ಹೇಳಿ ಕಳುಹಿಸಿದಳು. ತಿರುಜ್ಞಾನಿ ಸಂಬಂಧಿಗಳಿಗೆ ತಾವು ಹೇಳಿದಂತೆ ಕೇಳುವುದು ಮಹಾರಾಜನ ತಾಪವನ್ನು ಪರಿಹರಿಸಿ ಎಂದು. ಅದಕ್ಕೆ ಉತ್ತರವಾಗಿ ತಿರುಜ್ಞಾನಿ ಸಂಬಂಧಿಗಳು ಹೇಳಿಕಳುಹಿಸಿದರು. ಈ ಭಸಿತ ಹಣೆಯಲ್ಲಿ ಧರಿಸಿಕೊಂಡ ಶಿವ ಪಂಚಾಕ್ಷರಿ ಮಂತ್ರ ಉಚ್ಚರಿಸು ಎಂದು. ಮಹಾರಾಜ ಹಾಗೆಯೇ ಮಾಡಲು ನಿಂತಿತು. ಅರ್ಧ ಭಾಗ ಮತ್ತರ್ಧ ನಿಲ್ಲಿಸಿದರು. ಮತ್ತೆ ಹೋಗಿ ಬೇಡಲು, ಇನ್ನರ್ಧ ಶರೀರಕ್ಕೆ ವಿಭೂತಿ ಧರಿಸಲು ನೋವು ಸಂಪೂರ್ಣವಾಗಿ ನಾಶವಾಯಿತು. ಮಹಾರಾಜನಿಗೆ ಬೆನ್ನು ಗೂನಿತ್ತು ಈ ಗೂನನ್ನು ಸರಿಪಡಿಸುವೆ, ಎಂದು ಕೈಯಿಂದ ನೀವಿ ಸರಿಮಾಡಿದರು, ಆಗ ರಾಜನಿಗಾದ ಸಂತೋಷ ಅಷ್ಟಿಷ್ಟಲ್ಲ. "ನಿಮಗಿಂತ ಹೆಚ್ಚಿನವರು ಇನ್ನಿಲ್ಲ" ಎಂದು ನಮಸ್ಕರಿಸಿದ, ರಾಣಿಯೂ ನಮಸ್ಕರಿಸಿ ಇಬ್ಬರೂ ಶಿವ ಮತ ಅನುಯಾಯಿಗಳಾದರು.

(ಮುಂದುವರಿಯುವುದು)

ನಿಮಗಿದು ತಿಳಿದಿರಲಿ

# ತೊಗರಿಬೇಳೆ

ನಾವು ಪ್ರತಿನಿತ್ಯ ಉಪಯೋಗಿಸುವ ದವಸ ಧಾನ್ಯಗಳಲ್ಲಿ, ತರಕಾರಿಗಳಲ್ಲಿ, ಹಣ್ಣು ಹಂಪಲುಗಳಲ್ಲಿ ದೇಹದ ಬೆಳವಣಿಗೆಗೆ ಬೇಕಾದ ಅನೇಕ ಪೋಷಕಾಂಶಗಳು ಅಡಕವಾಗಿವೆ. ಅವು ದೇಹಕ್ಕೆ ಬೇಕಾಗುವ ಪೋಷಕಾಂಶಗಳನ್ನು ಒದಗಿಸುವುದರ ಜೊತೆಗೆ ಅನೇಕ ರೋಗಗಳಿಗೆ ದಿವ್ಯೌಷಧಿಯೂ ಆಗಿವೆ. ಆರೋಗ್ಯ ಕೆಟ್ಟಾಗ ಮಾತ್ರೆ, ಇಂಜೆಕ್ಷನ್‌ಗಳಿಗೆ ಮೊರೆ ಹೋಗುವುದರ ಬದಲು ನಮ್ಮಲ್ಲಿ ದೊರೆಯುವ ಆಹಾರ ಧಾನ್ಯಗಳು, ಹಸಿರು ಸೊಪ್ಪು, ತರಕಾರಿಗಳನ್ನು, ಹಣ್ಣುಗಳನ್ನು ಕ್ರಮಬದ್ಧವಾಗಿ ಉಪಯೋಗಿಸಿದರೆ ರೋಗವನ್ನು ಗುಣಪಡಿಸಿಕೊಳ್ಳಬಹುದು ಎಂಬುದನ್ನು ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು ತಮ್ಮ ಅಪೂರ್ವ ಗ್ರಂಥ 'ಆರೋಗ್ಯ ದರ್ಪಣ'ದಲ್ಲಿ ವಿವರವಾಗಿ ತಿಳಿಸಿದ್ದಾರೆ.



- ಸಂ.

ತೊಗರಿ ಬೇಳೆಯು ಒಗರು, ಒರಟಾದುದು. ಸಿಹಿ, ಶೈತ್ಯ ಗುಣವುಳ್ಳದು, ಹಗುರ, ಮಲವನ್ನು ಬಂಧಿಸುವುದು, ವಾತಗುಣವುಳ್ಳುದು, ಕಾಂತಿಯನ್ನುಂಟುಮಾಡುವುದು, ಪಿತ್ತ, ಕಫ, ರಕ್ತ ಇವುಗಳ ವಿಕಾರವನ್ನು ನಾಶಗೊಳಿಸುವುದು. ಎಲ್ಲಾ ವಿಧದ ಬೇಳೆಗಳಲ್ಲಿಯೂ ಪೋಷಕ ತತ್ವವು (ಪ್ರೋಟೀನ್) ಹೆಚ್ಚಾಗಿರುತ್ತದೆ. ರೊಟ್ಟಿ ಅನ್ನಗಳಿಂದ ಶರೀರಕ್ಕೆ ಸೇರುವ ಪೋಷಕ ತತ್ವದಲ್ಲಿ ಕಡಿಮೆಯಾಗುವ ಭಾಗವನ್ನು ಬೇಳೆಗಳು ಪೂರೈಸುತ್ತವೆ. ಈ ಕಾರಣದಿಂದಲೇ ಬೇಳೆಗಳು ಸಂಪೂರ್ಣ ಭಾರತದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿ ನಿತ್ಯದ ಆಹಾರದಲ್ಲಿ ಸೇರಿಕೊಂಡೇ ಇರುತ್ತವೆ. ನಮ್ಮ ದಕ್ಷಿಣ ದೇಶೀಯರಂತೂ ಬೇಳೆಯ ಪ್ರಯೋಜನವನ್ನು ನಾನಾರೂಪದಿಂದ ಹೊಂದುತ್ತಿರುವವರು. ಮಹಾರಾಷ್ಟ್ರ ದೇಶೀಯರೂ ಬೇಳೆಯ ಉಪಯೋಗವನ್ನು ಹೆಚ್ಚಾಗಿಯೇ ಹೊಂದುತ್ತಿರುವರು. ಒಟ್ಟಿನ ಮೇಲೆ ಈ ಬೇಳೆಯನ್ನು ಒಂದಲ್ಲ ಒಂದು ರೀತಿಯಲ್ಲಿ ಉಪಯೋಗಿಸದ ದೇಶವು ನಮ್ಮ ಭಾರತದಲ್ಲಿ ಇಲ್ಲವೆನ್ನಲು ಯಾವ ಅಡ್ಡಿಯೂ ಇಲ್ಲ. ಬಂಗಾಲ ಮತ್ತು ಪಂಜಾಬ್ ಪ್ರಾಂತದಲ್ಲಿ ಉದ್ದನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ಸಂಯುಕ್ತ ಪ್ರಾಂತದ ಅನೇಕ ಭಾಗಗಳಲ್ಲಿ ಹೆಸರನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ದಕ್ಷಿಣ ದೇಶದ ಸಕಲ ಭಾಗಗಳಲ್ಲಿಯೂ ತೊಗರಿಯು ಹೆಚ್ಚಾಗಿ ವ್ಯಾಪಿಸಿದೆ. ಉತ್ತರ ಭಾರತದಲ್ಲಿ ತೊಗರಿಯನ್ನು ಬಹಳ ಕಡಿಮೆಯಾಗಿ ಉಪಯೋಗಿಸುತ್ತಾರೆ. ಮತ್ತು ತೊಗರಿಯ ಬೇಳೆಯೂ ಬಹಳ ಕಡಿಮೆಯಾಗುತ್ತದೆ.

ಬೇಳೆಗಳಲ್ಲೆಲ್ಲಾ ಅತ್ಯಂತ ಹಿತಕಾರಿಗಳೆಂದರೆ ತೊಗರಿ ಮತ್ತು ಹೆಸರುಬೇಳೆ. ಇವೆರಡು ಯಾವಾಗಲೂ ಎಲ್ಲರಿಗೂ ಸಾಮಾನ್ಯವಾಗಿ ಪಥ್ಯಗಳಾಗಿರುತ್ತವೆ. ಇವುಗಳಿಂದ ರೋಗಿಗಳಿಗಾಗಲೀ, ನಿರೋಗಿಗಳಿಗಾಗಲೀ ಯಾವ ತೊಂದರೆಯೂ ಇಲ್ಲವೆಂಬುದು ಎಲ್ಲರಿಗೂ ಅನುಭವಸಿದ್ಧವಾಗಿದೆ. ಇತರ ವಿಧ ಬೇಳೆಗಳು ಅವರವರ ಪ್ರಕೃತಿಗನುಸಾರವಾಗಿ ಹಿತಾಹಿತಗಳನ್ನು ಉಂಟುಮಾಡುತ್ತವೆ. ತೊಗರಿಯ ಬೇಳೆಯು ಹೆಚ್ಚಿರತಕ್ಕ ಕಫ ಮತ್ತು ಪಿತ್ತವನ್ನು ಸಮಗೊಳಿಸಿ ವಾಯುವಿಕಾರ ವನ್ನು ಶಾಂತಗೊಳಿಸುತ್ತದೆ. ಜ್ವರಾತಿಸಾರ, ಸಂಗ್ರಹಣೆ, ಜ್ವರ, ವಾತರೋಗ, ಕುಷ್ಠ ಮತ್ತು ಕಣ್ಣುಗಳ ಸಂಬಂಧವಾದ ರೋಗಗಳಿಂದ ಪೀಡಿತರಾದವರಿಗೆ ವಿಶೇಷ ಲಾಭಕರವಾಗಿರುತ್ತದೆ. ಇಷ್ಟಲ್ಲದೆ ಇದರ ಹಿಟ್ಟಿನ ಲೇಪನದಿಂದ ಶರೀರದ ಬಣ್ಣವು ಹೆಚ್ಚಾಗುತ್ತದೆ. ಇದರಲ್ಲಿ ಮತ್ತೊಂದು ಜಾತಿಯ ಕೆಂಪು ಬೇಳೆಯು ಚನ್ನಂಗಿ ಅಥವಾ ಮಸೂರ್ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಆದರೆ ಈ ಕೆಂಪು ಬೇಳೆಯು ನಮ್ಮ ದೇಶದಲ್ಲಿ ಬೆಳೆಯುವುದಲ್ಲ, ಮತ್ತು ಇದನ್ನು ತಿನ್ನುವವರೂ ಕಡಿಮೆ. ಇದು ಬಹು ಬೇಗ ಕರಗಿ ಹೋಗುತ್ತದೆ. ಆದುದರಿಂದ ಸಾರಿಗೆ ಮಾತ್ರ ಉಪಯುಕ್ತವಾಗುವುದೇ ವಿನಾ ನಮ್ಮ ದೇಶದ ಬೇಳೆಯಂತೆ ಕಾಲಾನುಗುಣವಾಗಿ ಬಹುರೂಪಿಯಾಗಲು ಇದರಲ್ಲಿ ಸಾಮರ್ಥ್ಯವಿಲ್ಲ. ನಮ್ಮ ದೇಶದವರು ಇದನ್ನು ದೂರೀಕರಿಸಲು ಅನೇಕ ಕಾರಣಗಳಲ್ಲಿ ಇದೂ ಒಂದಾಗಿರ ಬಹುದು. ಆದರೆ ಕೆಂಪು ಬೇಳೆಗೆ ಇನ್ನೊಂದು ಗೌರವವನ್ನು ಮಾತ್ರ ಆಯುರ್ವೇದವು ಹೆಚ್ಚಾಗಿ ಕೊಟ್ಟಿದೆ. ಔಷಧಿ ರೂಪವಾಗಿ ಎಲ್ಲಿ ನೋಡಿದರೂ





ಈ ಮಸೂರ್ ಬೇಳೆಯೇ ಕಾಣಿಸುತ್ತದೆ. ಇದರಲ್ಲಿ ಲೋಹದ ಅಂಶವು ಮತ್ತು "ಫಾಸ್ಫರಿಕ್" ಹೆಚ್ಚಾಗಿರುವುದರಿಂದ ವಾರಕ್ಕೆರಡು ಸಲವಾದರೂ ಇದನ್ನು ತಿನ್ನುವುದು ಅತ್ಯಾವಶ್ಯಕವೆಂದು ಅನೇಕ ಅನುಭವಿಗಳಾದ ವೈದ್ಯರು ಹೇಳಿರುತ್ತಾರೆ. ಮತ್ತು ಸ್ವಂತ ಅನುಭವದಿಂದಲೂ ತಿಳಿದುಬಂದಿದೆ. ಈ ಬೇಳೆಯು ಬಹಳ ಶೀಘ್ರವಾಗಿ ಜೀರ್ಣಿಸತಕ್ಕುದ್ದೂ ಮತ್ತು ಬಹಳ ರುಚಿಕರವೂ ಆಗಿರುತ್ತದೆ. ಈ ಬೇಳೆಯಲ್ಲಿ ಇನ್ನೊಂದು ಮುಖ್ಯ ಗುಣವೇನೆಂದರೆ ಇತರ ಬೇಳೆಗಳಂತೆ ಇದು ಮಲಬದ್ಧತೆಯನ್ನು ಉಂಟು ಮಾಡುವುದಿಲ್ಲ ಮತ್ತು ಇದರ ಸೇವನೆಯಿಂದ ಹೊಟ್ಟೆಯಲ್ಲಿ ಗುಡುಗುಡು ಶಬ್ದವಾಗುವುದು, ಹೊಟ್ಟೆಯಲ್ಲಿ ಗುರುಗುಟ್ಟುವುದು ಮುಂತಾದ ತೊಂದರೆಗಳೂ ನಿವಾರಣೆಯಾಗುತ್ತವೆ.

- ❑ ಸಣ್ಣ ಮಕ್ಕಳಿಗೆ ಅತಿ ಉಷ್ಣವಾದಾಗ ಕೆಲವು ಸಂದರ್ಭಗಳಲ್ಲಿ ಆಸನದ ಒಳಭಾಗವು (ಗೂದೆ) ಹೊರಕ್ಕೆ ಬಂದು ಬಹಳ ತೊಂದರೆಯನ್ನುಂಟುಮಾಡುತ್ತದೆ. ಅಂತಹ ಸಮಯದಲ್ಲಿ ತೊಗರಿಬೇಳೆಯನ್ನು ನೀರಿನಲ್ಲಿ ನೆನೆಹಾಕಿದ್ದು ಚೆನ್ನಾಗಿ ನೆನೆದಮೇಲೆ ಅದನ್ನು ಕಲ್ಲಿನಮೇಲೆ ಚೆನ್ನಾಗಿ ಅರೆದು ಒಂದು ಬಟ್ಟೆಗೆ ಲೇಪಿಸಿ ಆಸನಕ್ಕೆ ಕಟ್ಟಿದರೆ ಗೂದೆಯು ಒಳಕ್ಕೆ ಹೋಗುತ್ತದೆ. ಇದೇ ರೀತಿಯಾಗಿ ಕೆಲವು ದಿನಗಳವರೆಗೆ ಕಟ್ಟುತ್ತಿದ್ದರೆ ಪುನಃ ಹೊರಗೆ ಬರುವುದು ನಿಂತುಹೋಗುತ್ತದೆ.
- ❑ ಒಂದು ತೊಲ ನಮ್ಮ ದೇಶದ ತೊಗರಿಯ ಎಲೆಗಳನ್ನು ಒಂದು ಚಟಾಕು ತಣ್ಣೀರಿನಲ್ಲಿ ಅರೆದು ಶೋಧಿಸಿ ಗಂಟೆಗೊಂದು ಸಲದಂತೆ ಕುಡಿದರೆ ಕಾಲರಾ ಅವಶ್ಯಕವಾಗಿ ನಿಂತುಹೋಗುತ್ತದೆ. ಪರೀಕ್ಷಿಸಲ್ಪಟ್ಟಿದೆ.
- ❑ ನಮ್ಮ ದೇಶದ ತೊಗರಿ ಗಿಡದ ಹಳೆಯ ಬೇರನ್ನು ತಂದು ಉತ್ತರಾಣಿ ಎಲೆಯ ರಸದಲ್ಲಿ ತೇಯ್ದು ಶುದ್ಧವಾದ ಜೇನುತುಪ್ಪದೊಡನೆ ಕೂಡಿಸಿ ಕಣ್ಣುಗಳಿಗೆ ಕಾಡಿಗೆಯಂತೆ ಹಚ್ಚುತ್ತಿದ್ದರೆ ಕಣ್ಣಿನಲ್ಲಿ ಬಂದಿರುವ ಹೂವು ಕರಗಿಹೋಗುತ್ತದೆ. ಪರೀಕ್ಷಿಸತಕ್ಕವರು ಆತುರಪಡ ಬಾರದು.
- ❑ ತೊಗರಿಯ ಹೊಟ್ಟನ್ನು ಚಿಲುಮೆಯಲ್ಲಿ ಹಾಕಿ ಕೆಂಡವನ್ನಿಟ್ಟು ಆ ಹೊಗೆಯನ್ನು ಸೇದುವುದರಿಂದ ಬಿಕ್ಕಳಿಕೆಯು ನಿಲ್ಲುತ್ತದೆ.
- ❑ ಎರಡು ತೊಲ ಕೆಂಪು ಬೇಳೆಯನ್ನು ಮತ್ತು ಒಂದು ತೊಲ ಬಿಲ್ವದ ತಿರುಳನ್ನು ೧೫ ತೊಲ ನೀರಿನಲ್ಲಿ ರಾತ್ರಿಯಲ್ಲಿ ನೆನೆಹಾಕಿದ್ದು ಪ್ರಾತಃಕಾಲದಲ್ಲಿ ಕುದಿಸಿ ೩ ತೊಲ ಕಷಾಯವನ್ನಿಳಿಸಿಕೊಂಡು ಕುಡಿಯುವುದರಿಂದ ಸಂಗ್ರಹಣಿ, ಕಾಮಾಲೆ, ಹೊಟ್ಟೆನೋವು ಇವೆಲ್ಲವೂ ನಿಲ್ಲುತ್ತವೆ.
- ❑ ಕೆಂಪು ಬೇಳೆ ಮತ್ತು ಸ್ವಲ್ಪ ಕರ್ಪೂರವನ್ನು ನೀರಿನೊಡನೆ ಅರೆದು ಅಂಗಾಲುಗಳಿಗೆ ಲೇಪಿಸುವುದರಿಂದ ಅಂಗಾಲಿನ ಉರಿಯು ಶಾಂತವಾಗುತ್ತದೆ.
- ❑ ಕೆಂಪು ಬೇಳೆಯ ಹಿಟ್ಟು ಒಂದು ತೊಲ, ಜವೆಯ ಹಿಟ್ಟು ಒಂದು ತೊಲ, ದಾಳಿಂಬೆಯ ಹೂವು ಒಂದು ತೊಲ, ದಾಳಿಂಬೆಯ ಚಕ್ಕೆ ಎರಡು ತೊಲ, ಕೆಂಡದ ಮೇಲಿಟ್ಟು ಅರಳುಮಾಡಿದ ಪಟಕ ಅರ್ಧ ತೊಲ, ಇವುಗಳನ್ನೆಲ್ಲಾ ನೀರಿನೊಡನೆ ಅರೆದು ಸ್ವಲ್ಪ ಇಪ್ಪೆಯ ಎಣ್ಣೆಯನ್ನು ಕೂಡಿಸಿ ಕಟ್ಟುವುದರಿಂದ ವಿಶೇಷ ಭೇದಿಯಾಗಿ, ಆಸನದ ಒಳಭಾಗವು (ಗೂದೆ) ಹೊರಗೆ ಹೊರಟಿದ್ದರೆ ಅದು ಒಳಗೆ ಸೇರುತ್ತದೆ.
- ❑ ಕೆಂಪು ಬೇಳೆ ಮತ್ತು ಆಲದ ಮರದ ಕೋಮಲವಾಗಿರುವ ಕುಡಿ ಇವೆರಡಕ್ಕೆ ಸ್ವಲ್ಪ ಕರ್ಪೂರವನ್ನೂ ಸೇರಿಸಿ ಹಾಲಿನೊಡನೆ ಅರೆದು ಮುಖಕ್ಕೆ ಹಚ್ಚಿ ಮೆಲ್ಲನೆ ತಿಕ್ಕಿ ಒಂದು ಗಂಟೆಯ ಮೇಲೆ ಮುಖವನ್ನು ತೊಳೆದುಕೊಳ್ಳಬಹುದು. ರಾತ್ರಿಯಲ್ಲಿ ಮಲಗುವಾಗ ಲೇಪಿಸಿಕೊಂಡು ಪ್ರಾತಃಕಾಲದಲ್ಲಿ ತೊಳೆಯುವುದು ಉತ್ತಮ. ಇದರಿಂದ ಮುಖದ ಮೇಲಿನ ಕಲೆಗಳು ಹೋಗುತ್ತವೆ.
- ❑ ಕೆಂಪು ಬೇಳೆ, ಅಕ್ಕಿ, ಜವೆ, ಬಟಾಣಿ, ಕಡಲೆಯ ಬೇಳೆ ಇವುಗಳನ್ನು ಸಮವಾಗಿ ತಂದು ಬೀಸಿ ಇಟ್ಟುಕೊಂಡು ಸ್ನಾನಮಾಡುವಾಗ ಶರೀರಕ್ಕೆ ತಿಕ್ಕಿ ಸ್ನಾನ ಮಾಡಬೇಕು. ಮತ್ತು ಮುಖವನ್ನು ತೊಳೆಯುವ ಸಮಯದಲ್ಲಿ ಸಾಬೂನಿಗೆ ಬದಲಾಗಿ ಸ್ವಲ್ಪ ಹಿಟ್ಟನ್ನು ತೆಗೆದುಕೊಂಡು ಹಚ್ಚಿ ತಿಕ್ಕುವುದರಿಂದ ಚರ್ಮವು ನುಣುಪಾಗುವುದಲ್ಲದೆ ಮುಖದ ಮೇಲಿನ ಕಲೆಗಳೂ ಹೋಗುತ್ತವೆ.
- ❑ ಕೆಂಪು ಬೇಳೆ, ಬಟಾಣಿ, ಜವೆ ಗೋಧಿ, ಕಡಲೆಯ ಬೇಳೆ ಇವುಗಳಲ್ಲಿ ಚರ್ಮವನ್ನು ನುಣುಪು ಮಾಡತಕ್ಕ ಮತ್ತು ಮೃದು ಮಾಡತಕ್ಕ ಗುಣವು ವಿಶೇಷವಾಗಿರುತ್ತದೆ. ಈ ಕಾರಣದಿಂದಲೇ ಆಯುರ್ವೇದ ಗ್ರಂಥಗಳಲ್ಲಿ ವರ್ಣವನ್ನು ಸ್ವಚ್ಛಗೊಳಿಸುವುದಕ್ಕೂ, ಚರ್ಮವನ್ನು ನಿರ್ಮಲಗೊಳಿಸುವುದಕ್ಕೂ ಈ ಬೇಳೆಗಳ ಅನೇಕ ವಿಧದ ಪ್ರಯೋಗಗಳು ಹೇಳಲ್ಪಟ್ಟಿವೆ. ಅವುಗಳಲ್ಲೆಲ್ಲಾ ಅನೇಕರಿಂದ ಪರೀಕ್ಷೆ ಮಾಡಲ್ಪಟ್ಟಿರುವ ಪ್ರಯೋಗಗಳನ್ನು ಆರಿಸಿ ಇಲ್ಲಿ ಕೊಟ್ಟಿರುವುದಾಗಿದೆ. ಪಾಠಕರು ಇವುಗಳಲ್ಲಿ ತಮಗೆ ಅನುಕೂಲವಾದುದನ್ನು ಆರಿಸಿಕೊಂಡು ಆತುರಪಡದೆ ಕೆಲವು ದಿನಗಳವರೆಗೆ ಅದರಂತೆ ಅನುಸರಿಸುತ್ತಿರಬೇಕು.
- ❑ ಮುಖದ ಸೌಂದರ್ಯವನ್ನು ವೃದ್ಧಿ ಮಾಡಿಕೊಳ್ಳಬೇಕೆಂಬ ಆಶೆಯು ಎಲ್ಲರಿಗೂ ಇರುವುದೇನೋ ನಿಜ! ಆದರೆ ಆ ಸೌಂದರ್ಯದ ವರ್ಧನೆಗೆ ನಿಜವಾದ ಉಪಾಯವನ್ನು

ಸಾಮಾನ್ಯವಾಗಿ ಯಾರೂ ಅನುಸರಿಸುತ್ತಿಲ್ಲ. ಎಲ್ಲರೂ ತಮ್ಮ ಮುಖಸೌಂದರ್ಯದ ವರ್ಧನಕ್ಕಾಗಿ ಸಾಬೂನು, ಪೌಡರ್, ಸ್ನೋ, ಕ್ರೀಂ ಮುಂತಾದ ಬಹುಬೆಲೆಯ ಕೃತ್ರಿಮ ಸಾಧನಗಳನ್ನೇ ಸಾಧಿಸಿಕೊಂಡಿರುತ್ತಾರೆ. ಈ ವಸ್ತುಗಳು ಮುಖ ಮತ್ತು ಶರೀರದ ಹುಳುಕುಗಳನ್ನು ಸ್ವಲ್ಪ ಹೊತ್ತು ಮುಚ್ಚತಕ್ಕವುಗಳೇ ಹೊರತು ಹುಳುಕುಗಳನ್ನು ನಿರ್ಮೂಲ ಮಾಡತಕ್ಕವುಗಳು ಅಲ್ಲವೆಂಬುದು ನಿರ್ವಿವಾದವಾದ ಮಾತು. ವ್ಯಾಪಾರಕ್ಕಾಗಿ ಕೇವಲ ಹಣವನ್ನೇ ಗಳಿಸುವ ಉದ್ದೇಶದಿಂದ ಈಗ ಬಜಾರದಲ್ಲಿ ನಾನಾ ವೇಷಗಳಿಂದ ನಿತ್ಯದಲ್ಲಿ ಬರುತ್ತಿರುವ ಪೌಡರ್ ಮುಂತಾದ ವಸ್ತುಗಳನ್ನು ಯಥಾರ್ಥ ವಾದಿಗಳಾದ ಅನೇಕ ವಿಜ್ಞಾನಶಾಸ್ತ್ರ ಪಂಡಿತರು ಹೀಯಾಳಿ ಸುವುದಲ್ಲದೆ ಆ ವಸ್ತುಗಳಿಂದ ಗುಣಕ್ಕೆ ಬದಲು ಹಾನಿಯೇ ಹೆಚ್ಚಾಗಿ ಆಗುತ್ತದೆಂದು ಹೇಳುತ್ತಾರೆ.

- ತೊಗರಿಬೇಳೆ, ಹೆಸರುಕಾಳು, ಬಟಾಣಿ, ಜವೆ, ಕಡಲೆಯ ಬೇಳೆ ಪ್ರತಿಯೊಂದು ಒಂದೊಂದು ಪಾವು, ಬಟ್ಟೆಗೆ ಹಾಕುವ ಕೂಗಟೆ (ಅಂಟವಾಳ) ಕಾಯಿಯ ಒಣಗಿದ ಸಿಪ್ಪೆ ಅರ್ಧ ಸೇರು, ಸೀಗೆಪುಡಿ ೧ ಪಾವು, ಒಣಗಿದ ನೆಲ್ಲಿ ಚೆಟ್ಟು ೧ ಪಾವು, ಬೇವಿನ ಎಲೆಯ ಪುಡಿ ೧ ಪಾವು, ಶ್ರೀಗಂಧದ ಪುಡಿ ೧ ಪಾವು, ಕಚೋರ ೧ ಪಾವು, ಲೋಧ್ರದ ಚಕ್ಕೆ ೧ ಪಾವು, ಕರ್ಪೂರ ೧ ತೊಲ, ಇವುಗಳನ್ನು ಕುಟ್ಟಿ ಶೋಧಿಸಿ ಉಪಯೋಗಿಸುವುದರಿಂದ ಯಾವ ವಿಧವಾದ ಚರ್ಮ ರೋಗವೂ ಅಂಟುವುದಿಲ್ಲ. ಮತ್ತು ಶರೀರವು ಬಹಳ ಮೃದು ವಾಗಿ ಮಖಮಲ್ಲಿನಂತೆ ನುಣುಪಾಗುವುದಲ್ಲದೆ ಕ್ರಮದಿಂದ ಯಾವ ಭಾಗದ ಕಲೆಯಾದರೂ ನಾಶವಾಗುತ್ತದೆ. ಹುಟ್ಟಿ ನಿಂದಲೇ ಇರುವ ಸ್ವಾಭಾವಿಕಕಲೆಗಳು ಮಾತ್ರ ಯಾವ ಉಪಾಯದಿಂದಲೂ ಹೋಗುವ ಸಂಭವವಿಲ್ಲ. ಆದರೆ ಕಡಿಮೆಯಾದರೂ ಆಗಬಹುದು. ಸ್ವಭಾವಕ್ಕೆ ಮದ್ದಿಲ್ಲವೆಂಬು ದನ್ನು ಯಾರೂ ಮರೆಯಬಾರದು. ಪ್ರಯತ್ನಪಟ್ಟರೆ ಬದಲಾವಣೆಯು ಅವಶ್ಯಕವಾಗಿ ಆಗಲೂಬಹುದು. "ಯತ್ನೇ ಕೃತೇ ಯದಿ ನ ಸಿಧ್ಯತಿ ಕೋಽತ್ರ ದೋಷಃ" ಪ್ರಯತ್ನ ಮಾಡಿದ ಮೇಲೆ ಫಲವಾಗದಿದ್ದರೂ ಯಾವ ದೋಷವೂ ಇಲ್ಲ. ಆದರೆ ಪ್ರಯತ್ನವನ್ನು ಮಾತ್ರ ಮಾಡದಿರಬಾರದು.
- ಕೆಂಪು ಬೇಳೆಯೊಂದನ್ನೇ ಸ್ವಲ್ಪ ಕರ್ಪೂರದೊಡನೆ ಹಾಲಿನಲ್ಲಿ ಅರೆದು ಹಚ್ಚುವುದರಿಂದ ಮುಖದ ಕಲೆಗಳು ದೂರ ವಾಗುತ್ತವೆ. ರಾತ್ರಿಯಲ್ಲಿ ಮಲಗುವಾಗ ಲೇಪಿಸಿ ಪ್ರಾತಃಕಾಲ ದಲ್ಲಿ ತೊಳೆದುಕೊಳ್ಳಬಹುದು.
- ಕೆಂಪು ಬೇಳೆಯನ್ನು ನಿಂಬೆಹಣ್ಣಿನ ರಸದೊಡನೆ ಅರೆದು ಹಚ್ಚುವುದರಿಂದ ಮುಖದ ಮೇಲಿನ ಕಲೆಗಳು ಹೋಗುತ್ತವೆ.
- ಕೆಂಪು ಬೇಳೆ, ಕೆಂಪು ಚಂದನ, ಲೋಧ್ರದ ಚಕ್ಕೆ, ಹಸಿ ಬೆಳ್ಳುಳ್ಳಿಯ ಕುಡಿ ಅಥವಾ ಒಣಗಿದ ಬೆಳ್ಳುಳ್ಳಿ, ಇವುಗಳನ್ನು ನೀರಿನೊಡನೆ ಅರೆದು ಲೇಪಿಸಿದರೆ ಮೊಡವೆಗಳು ಹೋಗುತ್ತವೆ ಮತ್ತು ಮುಖದಲ್ಲಿ ಯಾವ ವಿಧವಾದ ಗುಳ್ಳೆಗಳಿದ್ದರೂ ನಾಶವಾಗುತ್ತವೆ.
- ಎರಡೂವರೆ ಸೇರು ಚನ್ನಂಗಿ ಬೇಳೆಯನ್ನು ಎಂಟು ಸೇರು ನೀರಿನಲ್ಲಿ ಹಾಕಿ ಕುದಿಸಬೇಕು. ಎರಡು ಸೇರು ನೀರು ಉಳಿದನಂತರ ಕಿವಿಚಿ ಶೋಧಿಸಿಕೊಳ್ಳಬೇಕು. ಈ ಕಷಾಯವನ್ನು ಒಂದು ಕಲಾಯದ ಪಾತ್ರೆಯಲ್ಲಿ ಹಾಕಿ ಅದರಲ್ಲಿ ಹದಿನಾರು ತೊಲ ಬಿಲ್ವದ ತಿರುಳನ್ನೂ ಹಾಕಿ ಕಾಯಿಸಿ, ತುಪ್ಪವು ಮಾತ್ರ ಉಳಿದ ಮೇಲೆ ಕೆಳಗಿಳಿಸಿ ಶೋಧಿಸಿಕೊಂಡು ಇಟ್ಟುಕೊಳ್ಳಬೇಕು. ಪ್ರತಿ ದಿನದ ಪ್ರಾತಃಕಾಲ ಸಾಯಂಕಾಲಗಳಲ್ಲಿ ಈ ತುಪ್ಪವನ್ನು ಅರ್ಧ ತೊಲದಿಂದ ೧ ತೊಲದವರೆಗೆ ಸೇವಿಸಿ, ಅನಂತರ ಚನ್ನಂಗಿ ಬೇಳೆಯ ಕಷಾಯವನ್ನೇ ಕುಡಿಯಬೇಕು. ಇದರಿಂದ ಎಲ್ಲಾ ವಿಧದ ಭೇದಿ, ಸಂಗ್ರಹಣೆಗಳು ನಿಂತುಹೋಗುತ್ತವೆ. ಇದು "ಮಸೂರಘೃತ" ಎಂದು ಪ್ರಸಿದ್ಧವಾಗಿದೆ.
- ಮೇಲೆ ಕಾಣಿಸಿರುವ ಯಾವ ಲೇಪಕ್ಕಾದರೂ ಕೆಂಪು ಬೇಳೆಯು ಸಿಗದಿದ್ದರೆ ನಿತ್ಯದಲ್ಲಿ ಉಪಯೋಗಿಸುವ ಬೇಳೆಯನ್ನೇ ಉಪಯೋಗಿಸಬಹುದು. ಮತ್ತು ಕಾಳು, ಬೇಳೆಗಳಲ್ಲಿ ಯಾವುದು ದೊರೆಯುತ್ತದೆಯೋ ಅದನ್ನೇ ಉಪಯೋಗಿಸಬಹುದು. ತೊಗರಿ, ಹೆಸರು, ಕಡಲೆಬೇಳೆ, ಜವೆ, ಬಟಾಣಿ, ಅಕ್ಕಿ ಇವುಗಳಲ್ಲಿ ಚರ್ಮ, ವರ್ಣಗಳನ್ನು ನಿರ್ಮಲಗೊಳಿಸತಕ್ಕ ಗುಣವು ಸ್ವಲ್ಪ ಹೆಚ್ಚು ಕಡಿಮೆ ಒಂದೇ ವಿಧವಾಗಿರುವುದರಿಂದ ಯಾವುದನ್ನಾದರೂ ಉಪಯೋಗಿಸ ಬಹುದು.
- ಕೆಂಪು ಬೇಳೆ ಮತ್ತು ಬೇವಿನ ಎಲೆ ಇವೆರಡನ್ನೂ ನೀರಿನೊಡನೆ ಅರೆದು ವೈಶಾಖ ಮಾಸದಲ್ಲಿ ಒಂದು ತಿಂಗಳು ಪೂರ್ತಿಯಾಗಿ ಕುಡಿದರೆ ೧ ವರ್ಷದವರೆಗೆ ಹಾವಿನ ವಿಷದ ಭಯವಿಲ್ಲವೆಂದು "ಚಕ್ರದತ್ತ ಪಂಡಿತ"ನು ಬರೆದಿರುತ್ತಾನೆ. ಬೇವಿನ ಎಲೆಯನ್ನು ಒಂದೊಂದು ಎಲೆಯಿಂದ ಆರಂಭಿಸಿ ೩೦ ಎಲೆಗಳವರೆಗೆ ತಿನ್ನಬಹುದು. ಕಹಿಯನ್ನು ಸಹಿಸತಕ್ಕ ಸ್ವಭಾವವುಳ್ಳವರು ಬೇಕಾದರೆ ಹೆಚ್ಚಾಗಿಯೇ ತಿನ್ನಬಹುದು. ಪ್ರತಿ ದಿನದಲ್ಲಿ ೧ ತೊಲ ಅಥವಾ ೨ ತೊಲ ಬೇವಿನ ಸೊಪ್ಪು, ಅಷ್ಟೇ ತೂಕದ ಬೇಳೆ, ಈ ಲೆಕ್ಕವನ್ನು ಇಟ್ಟುಕೊಂಡರೆ ಬಹು ಸುಲಭವಾಗುತ್ತದೆ.





# ಪ್ರತಿಭಾ ಸಮದರ್ಶಿ ಶ್ರೀ ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರು



*ಪ್ರತಿವರ್ಷ ಶ್ರೀಕ್ಷೇತ್ರದಲ್ಲಿ ಆಚರಿಸುವ ಗುರುವಂದನಾ ಮಹೋತ್ಸವದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಗಣ್ಯರಿಗೆ ಪ್ರಶಸ್ತಿ ನೀಡಿ ಗೌರವಿಸುವ ಸತ್‌ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದೆ. ಅದರಂತೆ ಈ ವರ್ಷವೂ ಪರಮಪೂಜ್ಯ ಶ್ರೀಶ್ರೀಗಳವರ ೯೩ನೇ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ನಾಲ್ಕು ಜನ ಮಹನೀಯರನ್ನು ಶ್ರೀಮಠದ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಅತ್ಯಂತ ಸಂತೋಷ-ಸಡಗರದಿಂದ ಬರಮಾಡಿಕೊಂಡು, ಗೌರವಿಸಿತು. ಈ ನಾಲ್ಕು ಜನರಲ್ಲಿ ಶ್ರೀ ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರೂ ಒಬ್ಬರು. ಅವರ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ.*

ಅವರೊಬ್ಬ ಶರಣ ತತ್ವನಿಧಿ. ನಡೆದಾಡುವ ಶಿವಸ್ವರೂಪಿ ಶ್ರೀ ಶಿವಕುಮಾರಸ್ವಾಮಿಗಳು ನಮ್ಮ ಉಪನಿಷತ್ಕಾಲದ ಋಷಿಮುನಿಗಳಂತೆ ಮಹಾಮಹಿ ಮಾನ್ವಿತರು. **ಸತ್ಯಾನ್ನಪ್ರಮದಿತವ್ಯಂ. ಧರ್ಮಾನ್ನ ಪ್ರದಿತವ್ಯಂ. ಕುಶಲಾನ್ನ ಪ್ರಮದಿತವ್ಯಂ. ಭೂತ್ಯೈನ ಪ್ರಮದಿತವ್ಯಂ ಸ್ವಾಧ್ಯಾಯ ಪ್ರವಚನಾಭ್ಯಾಂನ ಪ್ರಮದಿತವ್ಯಂ** ಎಂಬ ಉಪನಿಷದ್ವಾಕ್ಯಕ್ಕೆ ನಿದರ್ಶನವಾಗಿ ತಮ್ಮ ಬದುಕನ್ನು ರೂಪಿಸಿ ಕೊಂಡವರು. ಸತ್ಯಕ್ಕೆ ತಪ್ಪಿ ನಡೆಯಬೇಡ, ಧರ್ಮವನ್ನು ಬಿಡಬೇಡ. ಕುಶಲ ಸಾಧಿಸುವುದಕ್ಕೆ ಮರೆಯಬೇಡ. ವ್ಯಕ್ತಿ ಧರ್ಮವನ್ನೂ, ಸಮಾಜ ಧರ್ಮವನ್ನೂ ಅತಿಕ್ರಮಿಸಬೇಡ. ಅಭ್ಯಾಸ ಪ್ರವಚನಾದಿ ಗಳನ್ನು ಬಿಡಬೇಡ ಎಂಬ ಸಂದೇಶ ಸ್ವರೂಪಿಯಾದದ್ದು ಅವರ ಜೀವನ ಎಂಬ ಸನ್ಮಾನ್ಯ ಶ್ರೀ ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರು ಸಮದರ್ಶಿಗಳು. ಚಿತ್ತಶುದ್ಧಿಯ ಚಿನ್ನಮೌಲ್ಯರು. **ಎಚ್ಚೆಸ್ಕೆ** ಯೆಂದೇ ಲೋಕಪ್ರಸಿದ್ಧರು.

ಶ್ರೀಯುತರು ಮೈಸೂರು ಜಿಲ್ಲೆ ಕೆ.ಆರ್. ನಗರ ತಾಲ್ಲೂಕು ಹಲೆಯೂರಿನ ಥಳತಳಿಸುವ ವಿದ್ವದ್‌ರತ್ನ. ಪಿತೃಪುಣ್ಯರು ಶ್ರೀ ಹೆಚ್. ಶ್ರೀನಿವಾಸ ಅಯ್ಯಂಗಾರ್, ಮಾತೃಜ್ಯೋತಿ ಶ್ರೀಮತಿ ಅಲಮೇಲಮ್ಮನವರು. ಜನಿಸಿದ ಸ್ಮರಣೀಯ ದಿನದಿವ್ಯ ೨೦.೮.೧೯೨೦. ಹಳೆಯೂರಿನಲ್ಲೇ ಓದಿದರು ಪ್ರಾಥಮಿಕ ಮಾಧ್ಯಮಿಕ ತರಗತಿಯಲ್ಲಿ. ನಡೆದರು ಮೈಸೂರಿಗೆ ಪ್ರೌಢವಿದ್ಯಾಭ್ಯಾಸಕ್ಕೆ. ಪಡೆದರು ಬೆಂಗಳೂರಿ ನಲ್ಲಿ ಬಿ.ಕಾಂ. ಪದವಿಯನ್ನು, ಮೈಸೂರು ವಿಶ್ವವಿದ್ಯಾಲಯದ ನೆರಳಿನಲ್ಲಿ. ತೆರಳಿದರು ಬೆನರಾಸ್ ವಿಶ್ವವಿದ್ಯಾಲಯಕ್ಕೆ ಎಂ.ಎ. ಪದವಿಗಾಗಿ. ಪಡೆದು ಹಿಂದಿರುಗಿ ವೃತ್ತಿ ಜೀವನಕ್ಕೆ ನೇಗಿಲೂಡಿದ್ದು ಬೆಂಗಳೂರಿನಲ್ಲಿ ಪತ್ರಿಕೋದ್ಯಮ ಮತ್ತು ಅಧ್ಯಾಪಕರಾಗಿ. ಸಾಧನೆಯ ಹೆಜ್ಜೆ ಸಾಗಿದುವು. ದಾರಿ ಬೆಳೆಸಿದುವು. ಮೈಲಿಗಲ್ಲುಗಳನ್ನು ಇಡುತ್ತಾ ಮುನ್ನಡೆದುವು. ಮೈಸೂರಿನತ್ತ ಸರಿದವು. ಅಲ್ಲಿ ಪ್ರಖ್ಯಾತ ಶಿಕ್ಷಣ ಸಂಸ್ಥೆಯಾಗಿದ್ದ ಡಿ. ಬನುಮಯ್ಯ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿ ಜೀವನಾರಂಭ ಮಾಡಿದ ಶ್ರೀಯುತರು ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದರು. ಕೀರ್ತಿಗಳಿಸಿದರು. ಸಾರಸ್ವತ ಲೋಕದ ಗಣ್ಯರೆನಿಸಿದರು. ಮೈಸೂರು ವಿಸ್ವವಿದ್ಯಾನಿಲಯ ರಾಷ್ಟದ ಪ್ರತಿಷ್ಠಿತ ಘನತೆ, ಗೌರವಗಳಿಸಿದ್ದರ

ಹಿಂದೆ ಎಚ್ಚೆಸ್ಕೆಯವರ ಸದ್ದಿಲ್ಲದ ನಿಷ್ಕಾಮ ಸೇವೆ ಸಂದಿದೆ ಎಂಬುದನೇಕರಿಗೆ ಗೊತ್ತಿಲ್ಲ. ಶ್ರೀಯುತರು ಮಾನಸ ಗಂಗೋತ್ರಿಯಲ್ಲಿ ಕನ್ನಡ ವಿಶ್ವಕೋಶದ ಮಾನವಿಕ ವಿಭಾಗದ ಸಂಪಾದಕರಾಗಿ ದುಡಿದದ್ದು, ಮರೆಯಲಾಗದ ಸೇವೆ. ಅಂತೆಯೇ ಮಾನವಿಕ ಕರ್ನಾಟಕದ ತ್ರೈಮಾಸಿಕದ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಜೊತೆಗೆ ಬ್ಯಾಂಕಿಂಗ್ ಪ್ರಪಂಚದ ತ್ರೈಮಾಸಿಕ ಸಂಪಾದಕರಾಗಿ ಶ್ರಮಿಸಿದ್ದು ಸ್ಮರಣೀಯ. ೧೯೮೦ರಲ್ಲಿ ನಿವೃತ್ತರಾದರು, ವೃತ್ತಿ ಜೀವನದಿಂದ.

**ಕ್ರಿಯಾಶೀಲ**

ಶ್ರೀ ಎಚ್ಚೆಸ್ಕೆಯವರ ಪ್ರವೃತ್ತಿಗೆ ನಿವೃತ್ತಿಯಿಲ್ಲ. ಅದೂ ಸದಾ ಕ್ರಿಯಾಶೀಲ, ಜಾಗೃತ ಜಗದ ಆಗುಹೋಗುಗಳನ್ನು ತನ್ನ ಅಕ್ಷರಗಳಲ್ಲಿ ದಾಖಲಿಸುತ್ತಾ ನಡೆದಿರುವ ತವನಿಧಿ. ಅವರೊಂದು ವಿದ್ವತ್ತಿನ ಸೃಜನಶೀಲ ಪ್ರತಿಭೆಯ ರತ್ನಗಣಿ. ಅವರ ಬರವಣಿಗೆ ನಿತ್ಯನೂತನ, ನವನವೋನ್ಮೇಷಶಾಲಿನಿ. **ಎಚ್ಚೆಸ್ಕೆ ಸಮದರ್ಶಿ, ವಿಚಾರಪ್ರಿಯ, ವಾರದವ್ಯಕ್ತಿ, ವ್ಯಕ್ತಿ ವಿಷಯ,** ಈ ಕಾವ್ಯನಾಮಗಳಲ್ಲಿ• ಸುಧಾ, ಪ್ರಜಾವಾಣಿ, ಪತ್ರಿಕೆಗಳಲ್ಲಿ ಅಂಕಣ ಬರಹಗಳನ್ನು ಬರೆದರು. ಆರ್ಥಿಕ ಚಿಂತನೆ, ಹೊಸಪಯರುಗಳ ಶೀರ್ಷಿಕೆಯಲ್ಲಿ ಮನಸ್ಸು ಮೆಲುಕು ಹಾಕುವಂತಹ ಜಾಗತಿಕ ಸಮಕಾಲೀನ ಪ್ರಸ್ತುತ ಸಮಸ್ಯೆಗಳನ್ನು ವಿಗ್ರಹಗೊಳಿಸಿದ್ದಾರೆ. ೧೯೩೮ರಿಂದಲೂ ಅನೇಕ ಪತ್ರಿಕೆಗಳಲ್ಲಿ ವಿಚಾರಪೂರ್ಣ ವಿಮರ್ಶೆ, ಕತೆ, ಲಲಿತ ಪ್ರಬಂಧ, ವ್ಯಕ್ತಿಚಿತ್ರಗಳನ್ನು ನೀಡುತ್ತಾ ಬಂದಿದ್ದಾರೆ. ಅಂಕಣ ಬರಹಗಳಲ್ಲಿ ನಾಡಿನ ಮತ್ತೊಬ್ಬ ಪ್ರಸಿದ್ಧ ಲೇಖಕರಾದ ಡಾ. ಹಾ.ಮಾ. ನಾಯಕರಂತೆ ಬಹುದೊಡ್ಡ ಹೆಸರು ಸನ್ಮಾನ್ಯ ಶ್ರೀ ಎಚ್ಚೆಸ್ಕೆ ಯವರದು.

**ಕೃತಿರತ್ನಗಳು**

ಶ್ರೀ ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರು ಒಂದು ಸುಂದರ ತೋಟದಲ್ಲಿ ಅರಳಿ ಪರಿಮಳಿಸುತ್ತಿರುವ ಸಾಹಿತ್ಯ ಕುಸುಮಗಳು ಅನೇಕ. ಅವೂ ಕೂಡ ವೈವಿಧ್ಯಮಯ. ನೂರುಸ್ವರ ನೂರು ತೆರ ಒಂದೊಂದೂ ಸುಮಧುರ. **'ದವನದ ಕೊನೆ'** ಕವನ ಸಂಕಲನವಾದರೆ, ಕಾದಂಬರಿಗಳಾಗಿ ಮೈದಾಳಿವೆ **ಮುಕ್ತಿಯಾಗರ, ಬಯಕೆಯ ಬಲೆ ಕುರುಕ್ಷೇತ್ರಗಳು, ಕಳ್ಳಹೊಕ್ಕಮನೆ, ಜೇಡರಬಲೆ, ಸುರಹೊನ್ನೆ, ಚಂದ್ರಕಾಂತಿ, ಮೇಘಲಹರಿ, ಹವಳದಸರ, ಮಿಂಚಿನ ಹುಡಿಗಳು ಲಿಖಿತ ಪ್ರಬಂಧಗಳಾಗಿ ಅರಳಿದರೆ, ಜೀವನಚರಿತ್ರೆ ಗಳಾಗಿ ಶ್ರೀರಾಮಾನುಜ, ಎತ್ತರದ ವ್ಯಕ್ತಿಗಳು, ಡಾ. ವಿ.ಕೆ.ಆರ್.ವಿ. ರಾವ್, ಬದುಕು ಬೆಳಕು, ಲಾಲ್‌ಬಹಾದ್ದೂರ್ ಶಾಸ್ತ್ರಿ ಡಾ. ಬಿ.ಆರ್. ಅಂಬೇಡ್ಕರ್, ಬಿ.ಆರ್. ಪಂತುಲು, ಯಮುನಾ ಚಾರ್ಯ, ಜಯಪ್ರಕಾಶ್ ನಾರಾಯಣ್, ಸಿದ್ಧಗಂಗೆಯ ಸಿದ್ಧಪುರುಷ,** ಕೃತಿ ಪುಷ್ಪಗಳು ಕನ್ನಡ ಸಾರಸ್ವತ ಲೋಕದ ಶ್ರೀಮಂತಿಕೆಯನ್ನು ಹೆಚ್ಚಿಸಿವೆ. ಸದಭಿರುಚಿಯ, ಶುದ್ಧದೃಷ್ಟಿಯ, ಸೌಂದರ್ಯನಿತ್ಯದ, ಸಮಭಾವ, ಸಹನಾಸಂಸ್ಕೃತಿಯ ಸತ್ಯದ ಬಿತ್ತಗಳಾಗಿ ಎಚ್ಚೆಸ್ಕೆಯವರ ಸಾಹಿತ್ಯಕೃತಿಗಳು ಸಾರ್ವಕಾಲಿಕ ಪ್ರಸ್ತುತಗಳೆನಿಸುತ್ತವೆ. ಎಚ್ಚೆಸ್ಕೆಯವರು ಬರೆದಿರುವ ಎತ್ತರದ ವ್ಯಕ್ತಿಗಳು, **ಬದುಕು ಬೆಳಕು, ಬೆಳಕು ಚೆಲ್ಲಿದ ಬದುಕು, ಮಾನ್ಯರು ಸಾಮಾನ್ಯರು, ಗಗನ ಚುಕ್ಕಿ ಭರಚುಕ್ಕಿ (ಅಚ್ಚಿನಲ್ಲಿ), ಭಾರತದ ಭಾಷಾ ಸಮಸ್ಯೆ, ನಮ್ಮ ಅಭಿವೃದ್ಧಿಯ ಯೋಜನೆಗಳು, ಬ್ಯಾಂಕುಗಳಲ್ಲಿ ಕನ್ನಡ, ಪ್ರತಿಭಾ ಸಂದರ್ಶನ, ಗಾಂಧೀಜಿ ಒಂದು ಪುನರ್ದರ್ಶನ, (ಸಂಪಾದಿತ) ಬಾನುಲಿ ಬರವಣಿಗೆ (ಸಂಪಾದಿತ), ಎಚ್ಚೆಸ್ಕೆ ಅವರ ಆಯ್ದ ಬರಹಗಳು, ಎಚ್ಚೆಸ್ಕೆ ಚುಟುಕುಗಳು, ವಿಚಾರ ವಿಹಾರ (ಅಚ್ಚಿನಲ್ಲಿ) ಅವಲೋಕನ (ಸಂಪಾದಿತ)**ಗಳು ವೈಚಾರಿಕತೆಗೆ, ವ್ಯಕ್ತಿದರ್ಶನಕ್ಕೆ, ಚಿಂತನ ಮಂಥನಕ್ಕೆ ತತ್ವಾವಲೋಕನಕ್ಕೆ ಪುಟ ತೆರೆಯುತ್ತವೆ. ಶ್ರೀಯುತರ ಸಾಹಿತ್ಯ ಶಕ್ತಿ ಶ್ರೀಮಂತಿಕೆಯನ್ನು ಪರಿಚಯಿಸುತ್ತವೆ.

ಅರ್ಥಶಾಸ್ತ್ರ ಪ್ರಪಂಚದ ಪ್ರಖ್ಯಾತ ಲೇಖಕರು ಶ್ರೀಯುತರು, ಅವರ ಅರ್ಥಶಾಸ್ತ್ರದ ಲೇಖನಗಳನ್ನು ಅಧ್ಯಯನ ಮಾಡಿ ಐ.ಎ.ಎಸ್. ಪಾಸಾದ ಅಧಿಕಾರಿಗಳಿಂದು ಶ್ರೀಯುತರನ್ನು ಸ್ಮರಿಸುತ್ತಾರೆ. ಸುಮಾರು ಐವತ್ತಕ್ಕೂ ಹೆಚ್ಚು ಕೃತಿಗಳು, ಅರ್ಥಶಾಸ್ತ್ರಕ್ಕೆ ಸಂಬಂಧಿಸಿದಂತೆ, ವಾಣಿಜ್ಯಶಾಸ್ತ್ರವನ್ನು ಕುರಿತಂತೆ, ಸಂಕೀರ್ಣ (ಸಂಪಾದಿತ) ಗ್ರಂಥರೂಪಗಳಲ್ಲಿ ಬೆಳಕು ಕಂಡಿವೆ. ರಾಜ್ಯದ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯ ಪುಸ್ತಕಗಳಾಗಿ **ಜೇಡರ ಬಲೆ, ಸುರಹೊನ್ನೆ, ಮೇಘಲಹರಿ, ಹವಳದ ಸರ, ವ್ಯಾವಹಾರಿಕ ಕನ್ನಡ,** ಆಡಳಿತ ಗ್ರಂಥಗಳು ಆಯ್ಕೆಗೊಂಡು ಪ್ರೀತಿ ಗೌರವಗಳನ್ನು ಗಳಿಸಿವೆ.

**ಗೌರವ ಪ್ರಶಸ್ತಿ**

ಬಹುಶ್ರುತರಾಗಿರುವ, ವಿಮರ್ಶಕ ವಿವೇಕರತ್ನ





ರೆನಿಸಿರುವ, ವಿನಯ ಸೌಜನ್ಯಗಳ ಮೃದು ಭಾಷಿಗಳಾದ, ವಿದ್ವಾಂಸ ನಿಗರ್ವಿ ಗಳೆಂದೇ ಹೆಸರಾದ ಶ್ರೀ ಎಚ್ಚೆಸ್ಕೆಯವರು ಕನ್ನಡನಾಡು, ಜನ, ಸಂಘ ಸಂಸ್ಥೆಗಳು ಅಭಿಮಾನದಿಂದ ಗೌರವಿಸಿವೆ, ಸನ್ಮಾನಿಸಿ ಪ್ರಶಸ್ತಿ ನೀಡಿ ಪುರಸ್ಕರಿಸಿವೆ ಎಂಬುದಿಲ್ಲಿ ಸ್ಮರಣೀಯ. ಕರ್ನಾಟಕ ಸರ್ಕಾರ ದಿಂದ ಅನೇಕ ಬಹುಮಾನ ಪಡೆದ ಮಾನನೀಯರು ಶ್ರೀಯುತರು. ಸಾಹಿತ್ಯ ಪರಿಷತ್ತಿನ ಭಾಸ್ಕರರಾವ್ ಸ್ಮಾರಕ ಬಹುಮಾನ ವಿಜೇತರು. ಕನ್ನಡ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಭಾಜನರು. ಹೆಚ್.ಕೆ. ವೀರಣ್ಣಗೌಡ ಪ್ರಶಸ್ತಿ ಪಾತ್ರರು. ಕರ್ನಾಟಕ ಸರ್ಕಾರದ ರಾಜ್ಯಪ್ರಶಸ್ತಿ ಪಡೆದ ಧನ್ಯರು. ವಿಶ್ವಮಾನವ ಪ್ರಶಸ್ತಿ ಮಾನ್ಯರು.

ಸೌಮ್ಯ ಸ್ವಭಾವಕ್ಕೆ, ನಮ್ರ ನಡತೆಗೆ, ಹೂಹಾಸ್ಯ ಪ್ರವೃತ್ತಿಗೆ, ವಿದ್ವತ್ತಿಗನುಗುಣವಾದ ಸಹಜ ಗಾಂಭೀಯಕ್ಕೆ, ಅತಿಥಿ ಸತ್ಕಾರಕ್ಕೆ, ಆಸ್ತಿಕ ಮನೋಧರ್ಮಕ್ಕೆ, ಹೃದಯ ವೈಶಾಲ್ಯತೆಗೆ, ಮಿತ್ರ ಸಂಪತ್ತಿಗೆ, ಅಭಿಮಾನಿಗಳ ಐಶ್ವರ್ಯಕ್ಕೆ, ಗುರುಜನರಲ್ಲಿಟ್ಟಿರುವ ಅಸ್ಖಲಿತ ಭಕ್ತಿಗೆ, ಸ್ವಧರ್ಮನಿಷ್ಠೆ, ಪರದರ್ಮ ಸಹಿಷ್ಣುತೆಗೆ ಹೆಸರಾದ ಶ್ರೀ ಕೃಷ್ಣಸ್ವಾಮಿ ಅಯ್ಯಂಗಾರರು ಪರಮಪೂಜ್ಯ ಶ್ರೀಗಳವರನ್ನು ಕುರಿತು ಹೀಗೆನ್ನುತ್ತಾರೆ. *ಶ್ರೀ ಶಿವಕುಮಾರ ಸ್ವಾಮಿಗಳದು ನೆಟ್ಟನೆಯ ನಿಲವು. ವಯಸ್ಸಿನಿಂದ ಅವರ ನಡುವೇನೂ ಬಾಗಿಲ್ಲ. ಕೈ ನಡುಗುವುದಿಲ್ಲ, ಬುದ್ಧಿ ಎಂದಿನಂತೆ ಪ್ರಖರ, ದೃಷ್ಟಿ ತೀಕ್ಷ್ಣ. ಶ್ರವಣಶಕ್ತಿ ಅಸಾಧಾರಣ....ಕಿವಿಯೂ ಕಣ್ಣೂ ಚುರುಕು, ಅಸಾಧಾರಣವಾದ ಯೋಗ ಸಿದ್ಧಿಯಿಂದಲ್ಲದೆ, ನಿರಂತರ ಅಂಗಸಾಧನೆಯಿಂದಲ್ಲದೆ ಇದು ಅಸಾಧ್ಯ. ಆದರೂ ಅವರ ತಲೆ ಮಾತ್ರ ಬಾಗಿರುವುದು ತುಂಬ ಕುತೂಹಲಕರ. ಭಕ್ತ ಜನಕೋಟಿಯ ದುಃಖ ಸಂಕಟಗಳನ್ನು ಕಂಡು ಅವರು ತಲೆಬಾಗಿಸಿದ್ದಾರೆ, ದಯೆ ಅನುಕಂಪಗಳಿಂದ ಬಾಗಿದ್ದಾರೆ. ಈ ನೋವಿನ ಬದಲು ನಲಿವನ್ನು ಮೂಡಿಸುವುದು ಹೇಗೆ ಎಂಬ ಚಿಂತೆಯಿಂದ ಅವರು ಬಾಗಿದ್ದಾರೆ ಎನಿಸುತ್ತದೆ. ಎಲ್ಲರ ಸಂಕಟಗಳನ್ನು ಪರಿಹಾರ ಮಾಡುವುದು ಹೇಗೆ ಎಂಬ ಚಿಂತೆ ಅವರಿಗೆ ಹಾಸಲುಂಟು, ಹೊದೆಯಲುಂಟು. ಈ ಚಿಂತೆಯಿಂದಾಗಿಯೆ ಬಹುಶಃ ಅವರಿಗೆ ಬಾಗಿದ ಶಿರ.... ಅವರ ವೈರಾಗ್ಯ ನಿಷೇಧಾತ್ಮಕವಾದುದಲ್ಲ, ನೇತ್ಯಾತ್ಮಕವಲ್ಲ, ನಿರಾಶೆಯಿಂದ ಕೂಡಿದ್ದಲ್ಲ. ಅದು ಅಭಾವ ವೈರಾಗ್ಯವಲ್ಲ. ಇನ್ನೊಬ್ಬರ ದುಡಿಮೆಯನ್ನು ಕುಳಿತು ತಿನ್ನುವ, ಅದರ ಫಲವನ್ನು ಅನುಭವಿಸುವ ತರದ್ದಲ್ಲ.... ಸರಳತೆ, ಸಾಚಾತನ ಅವರಿಗೊಂದು ವ್ರತ, ಪ್ರಿಯವಾದ ವ್ರತ. ಅವರ ಗುಣಕ್ಕೆ ಅದು ಸಹಜ. ಅವರ ವೈರಾಗ್ಯದಲ್ಲೂ ಒಂದು ದಿವ್ಯ ಶೋಭೆಯುಂಟು. ಅವರ ಸರಳತೆಯಲ್ಲೊಂದು ಅಲೌಕಿಕ ಸೌಂದರ್ಯವುಂಟು. ಕಾಯಕದ ತಳಹದಿಯ ಮೇಲೆ ಗಳಿಸಿದ್ದನ್ನು ತಮಗಾಗಿ ಬಳಸಿಕೊಳ್ಳಲೊಲ್ಲೆನೆಂಬ, ಹಾಗೆ ಬಳಸಿಕೊಳ್ಳಲು ತಮಗೆ ಅಧಿಕಾರವಿಲ್ಲವೆಂಬ ಅವರದು ನಿಜವಾದ ವೈರಾಗ್ಯ.... ಅವರ ವೈರಾಗ್ಯಕ್ಕೆ ಹಿನ್ನೆಲೆಯಾಗಿ ಆತ್ಮವಿಶ್ವಾಸವುಂಟು, ಆತ್ಮಗೌರವವುಂಟು, ಅಹಂಕಾರ ದೂರವಾದ ದಿಟ್ಟತನವುಂಟು, ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ್ಕು ಕಾಯಕವ ಬಿಟ್ಟು ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲವೇ ಆ ಗುಣ ಅಮಳೇಶ್ವರಲಿಂಗಕ್ಕೆ ದೂರ ಎಂಬ ಧೋರಣೆ* ಪೂಜ್ಯ ಪಾದರನ್ನು ಹೃದಯತುಂಬಿ ತಮ್ಮ ಪ್ರಾಂಜಲ ಭಾವನೆಗಳ ಮೂಲಕ ಅನಾವರಣಗೊಳಿಸಿರುವ ಶ್ರೀ ಎಚ್ಚೆಸ್ಕೆಯವರನ್ನು ಪ್ರತಿಭಾಸಮದರ್ಶಿಗಳೆಂದು ಪ್ರಶಸ್ತಿ ನೀಡಿ ಗೌರವಿಸಿದೆ.

●

**"ಸಾಧ್ಯವಾದ ಮಟ್ಟಿಗೆ ನಾವು ಒಳ್ಳೆಯ ಜನರನ್ನು ತಯಾರು ಮಾಡಿದರೆ,**
**ಒಳ್ಳೆಯ ಪ್ರಜೆಗಳಾದರೆ ಅವರು ನಿಜವಾಗಿಯೂ ದೇಶದ ಆಸ್ತಿಯಾಗುತ್ತಾರೆ.**
**ಇಲ್ಲಿ ಬೇಕಾಗಿರತಕ್ಕಂಥದ್ದು ಯಾರು ದೀನರು, ದಲಿತರು, ನಿರ್ಗತಿಕರು,**
**ಅಸಹಾಯಕರು ಅವರ ಬಗ್ಗೆ ಕೊಂಚಮಟ್ಟಿಗಾದರೂ ಸೇವೆ ಸಲ್ಲಿಸಬೇಕಾದಂಥ**
**ಅವಕಾಶವನ್ನು ಪಡೆದುಕೊಳ್ಳುತ್ತಾರೋ ಅದೇ ಭವ್ಯ ಆಗತಕ್ಕಂಥ ದೃಶ್ಯ.**
**ಆನಂದವನ್ನುಂಟು ಮಾಡತಕ್ಕಂಥದ್ದು"**

**- ಶ್ರೀವಾಣಿ**

ಅಮೆರಿಕ - ಇಸ್ರೇಲ್ ಸಹಯೋಗದ ಫಲ

## ರಾಕೆಟ್ ನಾಶಕ್ಕೆ ಮಿಂಚಿನ ವೇಗದ ಲೇಸರ್ ಅಸ್ತ್ರ

**ಶ**ತ್ರು ರಾಕೆಟ್‌ನ್ನು ಮಾರ್ಗಮಧ್ಯದಲ್ಲಿಯೇ ಹೊಡೆದು ಉರುಳಿಸುವ ಲೇಸರ್ ಕಿರಣ ಆಧಾರಿತ ಅಸ್ತ್ರವನ್ನು ಅಮೆರಿಕ-ಇಸ್ರೇಲ್ ಅಭಿವೃದ್ಧಿಪಡಿಸಿದೆ. ಹೊಸ ಅಸ್ತ್ರದ ಪ್ರಯೋಗ ಪರೀಕ್ಷೆ ಇತ್ತೀಚೆಗೆ ಯಶಸ್ವಿಯಾದ ನಂತರ ರಕ್ಷಣಾ ಇಲಾಖೆ "ಇದೊಂದು ಕ್ರಾಂತಿಕಾರಕ ಅಸ್ತ್ರ" ಎಂದು ಹೆಮ್ಮೆಪಟ್ಟಿತು.

ಇನ್ನೂ ಕೆಲವು ಪ್ರಯೋಗಗಳನ್ನು ನಡೆಸಿದ ನಂತರ ಅಮೆರಿಕ ಹೊಸ ಅಸ್ತ್ರವನ್ನು ಇಸ್ರೇಲ್‌ಗೆ ಹಸ್ತಾಂತರಿಸಲಿದೆ. ಇಸ್ರೇಲ್ ತನ್ನ ಉತ್ತರದ ಗಡಿಗಳನ್ನು ರಾಕೆಟ್ ದಾಳಿಗಳಿಂದ ರಕ್ಷಿಸಿಕೊಳ್ಳಲು ಅದನ್ನು ಸಜ್ಜುಗೊಳಿಸಲಿದೆ.

ಅಲಬಾಮಾದ ಹಂಟ್ಸ್‌ವಿಲ್ಲೆಯಲ್ಲಿರುವ ತನ್ನ ಕೇಂದ್ರ ಕಚೇರಿಯಿಂದ ಹೊಸ ಅಸ್ತ್ರಕ್ಕೆ ಪ್ರತಿಕ್ರಿಯಿಸಿದ ಆರ್ಮಿಸ್ಪೇಸ್ ಅಂಡ್ ಮಿಸೈಲ್ ಡಿಫೆನ್ಸ್ ಕಮ್ಯಾಂಡ್‌ನ ಮುಖ್ಯಸ್ಥ ಲೆ.ಜ. ಜಾನ್‌ಕೋಸ್ಟೆಲ್ಲೊ ಅವರ ಹೆಮ್ಮರ ವೈಜ್ಞಾನಿಕ ಕನಸನ್ನು ನನಸು ಮಾಡಿದ್ದೇವೆ.

ಹೊಸ ಅಸ್ತ್ರದ ಪ್ರಯೋಗ ನ್ಯೂ ಮೆಕ್ಸಿಕೋನಲ್ಲಿರುವ ವೈಟ್ ಸ್ಯಾಂಡ್ಸ್ ಮಿಸೈಲ್ ರೇಂಜ್‌ನಲ್ಲಿ ನಡೆಯಿತು. **'ಲೇಸರ್'** (ಲೈಟ್ ಆಂಪ್ಲಿಫಿಕೇಷನ್ ಬೇ ಸ್ಟಿಮುಲೇಟೆಡೆ ಎಮಿಷನ್ ಆಫ್ ರೇಡಿಯೇಷನ್) ತುಂಬ ಪ್ರಬಲವಾದ ರಶ್ಮಿ ಶಕ್ತಿ. ಈಗ ಇಸ್ರೇಲ್‌ಗಾಗಿ ಅಭಿವೃದ್ಧಿಪಡಿಸಿರುವ ಅಸ್ತ್ರ ಫ್ಲೋರೈಡ್‌ನ ರಾಸಾಯನಿಕ ಕ್ರಿಯೆಯಿಂದ ಪಡೆದ ಲೇಸರ್. ಬೆಳಕಿನ ವೇಗದ ಅಸ್ತ್ರವಾದುದರಿಂದ ಎಷ್ಟೇ ದೂರದಲ್ಲಿ ಕ್ಷಿಪಣಿ ಇದ್ದರೂ ಹೆಚ್ಚು ಪ್ರಯಾಸವಿಲ್ಲದೆ ಹೊಡೆದುರುಳಿಸಬಹುದಾಗಿದೆ.

ಇಂಥ ಅಸ್ತ್ರಕ್ಕೆ ಸ್ಫೂರ್ತಿ ಹಿಂದಿನ ಅಮೇರಿಕದ ಅಧ್ಯಕ್ಷ ರೋನಾಲ್ಡ್ ರೀಗನ್ ೧೯೮೩ರ ಮಾರ್ಚ್ ೨೩ ರಂದು ಅವರು 'ಸ್ಟಾರ್ ವಾರ್' ಮಾದರಿಯ ರಕ್ಷಣಾ ವ್ಯವಸ್ಥೆಗೆ ಸಲಹೆ ಮಾಡಿದರು. ನೆಲದ ಮೇಲೆ ನಿಂತ ಇಂಥ ವ್ಯವಸ್ಥೆಯನ್ನು ಟ್ಯಾಕ್ಟಿಕಲ್ ಹೈ ಎನರ್ಜಿ ಲೇಸರ್ / ಅಡ್ವಾನ್ಸ್ಡ್ ಕಾನ್ಸೆಪ್ಟ್ ಟೆಕ್ನಾಲಜಿ ಡೆಮಾನ್‌ಸ್ಟ್ರೇಟರ್ ಎಂದು ಕರೆಯುತ್ತಾರೆ.

ಹೊಸ ಅಸ್ತ್ರದ ಮೊದಲ ಪ್ರಯೋಗ ಪರೀಕ್ಷೆ ಕತ್ಯೂಷ ರಾಕೆಟ್ ನೆಲೆಯಲ್ಲಿ ನಡೆಯಿತು. ಎರಡನೆಯ ಪ್ರಯೋಗ ಪರೀಕ್ಷೆಯಲ್ಲಿ ಅಸ್ತ್ರ ಇಸ್ರೇಲ್ ನಿರ್ಮಿತ ರೇಡಾರ್ ನೆರವಿನಿಂದ ತುಂಬಾ ದೂರದಲ್ಲಿ ರಾಕೆಟ್ಟನ್ನು ಗುರುತಿಸಿ ದಾಳಿ ಮಾಡಿತು. ಕೆಲವೇ ಸೆಕೆಂಡ್‌ಗಳಲ್ಲಿ ೧೦ ಅಡಿ ಉದ್ದದ ೩.೧೩ ಮೀಟರ್ ರಾಕೆಟ್ ಸ್ಫೋಟಗೊಂಡಿತು.

ಹೊಸ ಅಸ್ತ್ರಕ್ಕೆ ಇಸ್ರೇಲ್‌ನ ರಕ್ಷಣಾ ಸಚಿವಾಲಯದ ಮೇ.ಜ. ಐಸಾಕ್ ಬೆನ್ - ಇಸ್ರೇಲ್ ಅವರ ಪ್ರತಿಕ್ರಿಯೆ "ತುಂಬಾ ವಿಸ್ಮಯಕಾರಕ ಹಾಗೂ ಇಸ್ರೇಲ್‌ನ ಜನತೆಗೆ ಇದೊಂದು ತುಂಬಾ ಪ್ರಾಮುಖ್ಯವಾದ ಅಭಿವೃದ್ಧಿ".

## 'ಆಜ್ಞೆ'ಗೆ ಓಗೊಡುವ ಟಿ.ವಿ.

**ಟಿ**.ವಿ. ನಿಯಂತ್ರಣಕ್ಕೆ ಈಗ **'ರಿಮೋಟ್'** ಬಳಕೆಯಲ್ಲಿದೆ ತಾನೆ. ಶೀಘ್ರದಲ್ಲಿಯೇ ಅದೂ ಕೂಡ ಓಬಿರಾಯನ ಪಟ್ಟ ಕಟ್ಟಿಕೊಳ್ಳಲಿದೆ. ಕೇವಲ ಮಾತಿನ **'ಆಜ್ಞೆ'**ಗಳಿಗೆ ಓಗೊಡುವ ಟಿ.ವಿ. ಸಾಧನಗಳು ಶೀಘ್ರದಲ್ಲಿಯೇ ಪೇಟೆಗೆ ಬರಲಿವೆ. ಸಿಂಗಪುರದಲ್ಲಿನ **'ಫಿಲಿಪ್ಸ್ ಇನ್ನೊವೇಷನ್'** ಅಂತಹ ಸಾಧನ ಉತ್ಪಾದನೆಯಲ್ಲಿ ನಿರತವಾಗಿದೆ. **'ಲೌಡರ್'** (ಇನ್ನೂ ಜೋರಾಗಿ) **'ನೆಕ್ಸ್ಟ್'** (ಮುಂದಿನ ಚಾನೆಲ್) ಮುಂತಾದ ಶಬ್ದಗಳು ನಿಮ್ಮ ಬಾಯಿಂದ ಹೊರಬಿದ್ದ ಕೂಡಲೇ ಅವುಗಳಿಗೆ ಅನುಗುಣವಾಗಿ ನಿಮ್ಮ ಟಿ.ವಿ. ಕಾರ್ಯ ನಿರ್ವಹಿಸಲಿದೆ. ಬರುವ ವರ್ಷ ಅಂತಹ ಟಿ.ವಿ.ಗಳು ಪೇಟೆಗೆ ಬರುವ ನಿರೀಕ್ಷೆಯಿದೆ.

## ರೋಗ ನಿರೋಧಕ ಸೊಳ್ಳೆ

**ಮ**ಲೇರಿಯಾ ಮತ್ತಿತರ ಜ್ವರಗಳಿಗೆ ಕಾರಣವಾಗುವ ರೋಗಾಣುಗಳನ್ನು ಮನುಷ್ಯರಿಗೆ ಚುಚ್ಚುವ ಸೊಳ್ಳೆಗಳನ್ನೇ ಆ ರೋಗಾಣುಗಳಿಂದ ಪಾರುಮಾಡಿದರೆ ಹೇಗೆ? ವಿಸ್ಕನ್ ಸಿನ್ ಮಾಡಿಸನ್ ವಿಶ್ವವಿದ್ಯಾನಿಲಯದ ವಿಜ್ಞಾನಿಗಳು ಈ ದಿಶೆಯಲ್ಲಿ ಈಗ ವಿಚಾರ ಮಾಡುತ್ತಿದ್ದಾರೆ. ಅನೇಕ ರೋಗಾಣುಗಳನ್ನು ನಿರೋಧಿಸುವ ಶಕ್ತಿ ಹೊಂದಿರುವ ಸೊಳ್ಳೆಗಳು ಮಲೇರಿಯಾ ಮುಂತಾದ ರೋಗಾಣುಗಳನ್ನು ಎದುರಿಸಲಾರದ ಸ್ಥಿತಿಯಲ್ಲಿದ್ದು ಈ ಮೂಲಕ ಅವುಗಳನ್ನು ಮನುಷ್ಯರಿಗೆ ಸ್ಥಳಾಂತರಿಸುತ್ತಿವೆ. ಆದರೆ ಕೆಲವು ಸೊಳ್ಳೆಗಳಲ್ಲಿ ಅವುಗಳಿಗೆ ನಿರೋಧ ಒಡ್ಡುವ ಅಂಶಗಳು ಕಂಡುಬಂದಿರುವುದು ವಿಜ್ಞಾನಿಗಳ ಕುತೂಹಲ ಕೆರಳಿಸಿದ. ಆ ಅಂಶಗಳನ್ನೇ ಮಲೇರಿಯಾ ಅಥವಾ ಇತರ ಜ್ವರ ನಿರೋಧಕಗಳಾಗಿ ಪರಿವರ್ತಿಸಿ ಆ ಗುಣಗಳನ್ನು ಕೆಲವು ಸೊಳ್ಳೆಗಳಿಗೆ ಸ್ಥಳಾಂತರಿಸಿ ಅದೇ ಗುಣ ಪ್ರಕೃತಿಯಲ್ಲಿರುವ ಇತರ ಅವುಗಳ ಬಂಧು, ಬಳಗಕ್ಕೂ ಹರಡುವಂತೆ ಮಾಡುವುದೇ ವಿಜ್ಞಾನಿಗಳ ಗುರಿ. ಅದು ಕೈಗೂಡಿದರೆ ಮಾನವನಿಗೆ ಮಾರಕವಾದ ಮಲೇರಿಯಾ, ಫೈಲೇರಿಯಾ, ಹಳದಿ ಜ್ವರ ಮತ್ತು ಮೆದುಳು ಜ್ವರಗಳು ಸೊಳ್ಳೆ ಮೂಲಕ ಹರಡುವುದನ್ನು ತಡೆಗಟ್ಟಬಹುದೆಂಬುದು ಅವರ ಲೆಕ್ಕಾಚಾರ.

ಕೃಪೆ : 'ಜಾಣ'







ಎನ್.ಸಿ.ಸಿ.ಯಲ್ಲಿ ಅದ್ವಿತೀಯ ಸಾಧನೆಗಾಗಿ

ಶ್ರೀ ಪ್ರಭಾಕರ್ ಅವರಿಗೆ

## ಮುಖ್ಯಮಂತ್ರಿಗಳ ಪ್ರಶಸ್ತಿ

**ಎನ್**.ಸಿ.ಸಿ. ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಎರಡನೆ ಬಾರಿ ಮುಖ್ಯಮಂತ್ರಿಗಳ ಪ್ರಶಸ್ತಿಯನ್ನು ಪಡೆದ ಹೆಗ್ಗಳಿಕೆಗೆ ಪಾತ್ರರಾಗಿರುವ ಶ್ರೀ ಪ್ರಭಾಕರ್ ಅವರು ಎಲ್ಲರ ಪ್ರೀತಿ ಆದರಗಳಿಗೆ, ಅಭಿನಂದನೆಗೆ ಪಾತ್ರರಾಗಿದ್ದಾರೆ.

ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಯಾದ ಶ್ರೀ ಪ್ರಭಾಕರ್ ಅವರು ಕಳೆದ ೨೯ ವರ್ಷಗಳಿಂದ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶಿಕ್ಷಕ ವೃತ್ತಿಯ ಜೊತೆಯಲ್ಲಿಯೇ ಕಳೆದ ಇಪ್ಪತ್ತಾರು ವರ್ಷಗಳಿಂದ ಎನ್.ಸಿ.ಸಿ. ಅಧಿಕಾರಿಯಾಗಿ ಅವರು ಸಲ್ಲಿಸುತ್ತಿರುವ ಸೇವೆ ಅನನ್ಯ. ಸಾವಿರಾರು ಎನ್.ಸಿ.ಸಿ. ಕ್ಯಾಡೆಟ್‌ಗಳಿಗೆ ಶಿಸ್ತಿನ ತರಬೇತಿ ನೀಡಿ ರಾಷ್ಟ್ರದ ಬಗ್ಗೆ ಅಭಿಮಾನ, ಪ್ರೀತಿ ಗೌರವ ಬೆಳೆಯುವಂತೆ ಮಾಡುವಲ್ಲಿ ಅವರು ವಹಿಸುತ್ತಿರುವ ಪಾತ್ರ ಗಮನಾರ್ಹವಾದುದು.

ಸದಾ ನಗುಮುಖದ, ಸೌಜನ್ಯಶೀಲರಾದ ಶ್ರೀ ಪ್ರಭಾಕರ್ ಅವರು ಯಾವುದೇ ಕೆಲಸವನ್ನು ವಹಿಸಿಕೊಂಡರೂ ಶ್ರದ್ಧೆಯಿಂದ, ಪ್ರಾಮಾಣಿಕತೆಯಿಂದ ಮಾಡುವ ಗುಣ ಅವರಲ್ಲಿ ಮೈಗೂಡಿದೆ. ಇವರು ಎನ್.ಸಿ.ಸಿ. ಅಧಿಕಾರಿಯಾಗಿ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ ೧೯೮೮ರಲ್ಲಿ ಕರ್ನಾಟಕ ಸರ್ಕಾರ ಮುಖ್ಯಮಂತ್ರಿಗಳ ಪ್ರಶಸ್ತಿಯನ್ನು ಆಗಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ರಾಮಕೃಷ್ಣ ಹೆಗಡೆ ಅವರಿಂದ ಪಡೆದು ಶ್ರೀ ಕ್ಷೇತ್ರಕ್ಕೆ ಹಾಗೂ ಜಿಲ್ಲೆಗೆ ಕೀರ್ತಿಯನ್ನು ತಂದರು.

GOVERNMENT OF KARNATAKA

**Commendation**

BY

**The Chief Minister of Karnataka**

NCCJA
No. 23572 Rank C/O Name Prabhakara

of 1 Kar. Air Sqn NCC

*I am pleased to learn that while serving in the NCC organisation you have rendered service of a very high order, thus enhancing the image of the National Cadet Corps and winning laurels for Karnataka State.*

*I Commend you for your exceptional devotion to duty and the example you have set for others in the NCC organisation.*

S.M. KRISHNA
Chief Minister

ಜೀವನ ಒಂದು ರತ್ನವಿದ್ದಂತೆ; ಅದನ್ನು ಗೌರವಿಸಬೇಕು, ಅರಿತು ಬಾಳಬೇಕು. ಜೀವಿತಾವಧಿ ಪರಿಮಿತವಾದುದು. ಅಂತ್ಯ ಅನಿರೀಕ್ಷಿತವೆಂದು ಗ್ರಹಿಸಿ ನಡೆಯಬೇಕು.

\- ಶ್ರೀವಾಣಿ

ಎನ್.ಸಿ.ಸಿ. ಅಧಿಕಾರಿಯಾಗಿ ಅವರು ಸಲ್ಲಿಸುತ್ತಿರುವ ಗಣನೀಯ ಸೇವೆಯನ್ನು ಮನಗಂಡ ಕರ್ನಾಟಕ ಸರ್ಕಾರ ಕಳೆದ ಸಾಲಿನಲ್ಲಿ ರಾಜ್ಯಮಟ್ಟದ ಮುಖ್ಯ ಮಂತ್ರಿಗಳ ಪ್ರಶಸ್ತಿಯನ್ನು ಎರಡನೆ ಬಾರಿ ನೀಡಿ ಗೌರವಿಸಿದುದು ಅವರ ನಿಷ್ಠೆ, ಶ್ರದ್ಧೆ, ಪ್ರಾಮಾಣಿಕತೆಗೆ ಸಂದ ಗೌರವ.

ಕಳೆದ ವರ್ಷ ದೆಹಲಿಯಲ್ಲಿರುವ ಭಾರತೀಯ ವಿದ್ಯಾಭವನ ಶ್ರೀ ಪ್ರಭಾಕರ್ ಅವರ ಸದ್ದುಗದ್ದಲವಿಲ್ಲದ ಪ್ರಾಮಾಣಿಕ ಸೇವೆಯನ್ನು ಗೌರವಿಸಿ **ವಿಶಿಷ್ಟ ಆಚಾರ್ಯ ಪ್ರಶಸ್ತಿ**ಯನ್ನು ನೀಡಿ ಗೌರವಿಸಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ಹಾಗೂ ಜಿಲ್ಲೆಯ ಕೀರ್ತಿಯನ್ನು ರಾಜ್ಯ ಹಾಗೂ ರಾಷ್ಟ್ರ ಮಟ್ಟದಲ್ಲಿ ಪಸರಿಸುವಂತೆ ಮಾಡಿರುವ ಶ್ರೀ ಪ್ರಭಾಕರ್ ಅವರನ್ನು 'ಸಿದ್ಧಗಂಗಾ' ಮಾಸಪತ್ರಿಕೆ ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

# ಮೈಸೂರು ನಗರದಲ್ಲಿ
# ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಸಂಘದ ಶಾಖೆ ಪ್ರಾರಂಭ



ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳೂ, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಂಶುಪಾಲರೂ ಆದ ಡಾ. ಎಂ.ಎನ್. ಚನ್ನಬಸಪ್ಪ ಅವರು ಮಾತನಾಡುತ್ತಿರುವುದು.

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ವ್ಯಾಸಂಗಮಾಡಿ ಪರಮಪೂಜ್ಯ ಶ್ರೀಶ್ರೀಗಳವರ ಮಾರ್ಗದರ್ಶನ ಹಾಗೂ ದಿವ್ಯಾಶೀರ್ವಾದದ ಮುಂಬೆಳಕಿನಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ಸಾವಿರಾರು ಜನರು ನಾಡಿನ ಹಾಗೂ ರಾಷ್ಟ್ರದ ಮೂಲೆ ಮೂಲೆಗಳಲ್ಲಿ, ವಿವಿಧ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪ್ರತಿದಿನ ಅವರ ಮನ ಮನೆಗಳಲ್ಲಿ ಶ್ರೀ ಸಿದ್ಧಗಂಗಾ ಜ್ಯೋತಿ ಬೆಳಗುತ್ತಿದ್ದು, ಅವರು ಮನಸ್ಸಿನಲ್ಲಿ ಸದಾ ಶ್ರೀಕ್ಷೇತ್ರದ ಬಗ್ಗೆ ಪೂಜ್ಯ ಶ್ರೀಶ್ರೀಗಳವರ ಬಗ್ಗೆ ಅಪಾರವಾದ ಭಕ್ತಿ ಹಾಗೂ ಕೃತಜ್ಞತೆಗಳಿಂದ ಸ್ಮರಿಸುತ್ತಿದ್ದಾರೆ.

ತಮ್ಮಲ್ಲಿ ಮನೆಮಾಡಿಕೊಂಡಿರುವ ಕೃತಜ್ಞತೆಗೆ ಸಾಕಾರ ರೂಪಕೊಟ್ಟು ಶ್ರೀಕ್ಷೇತ್ರದ ಕಾರ್ಯಚಟುವಟಿಕೆಗಳಲ್ಲಿ ತಾವು ಭಾಗಿಗಳಾಗಿ ತಮ್ಮ ಕೈಲಾದಷ್ಟು ಅಳಿಲು ಸೇವೆ ಸಲ್ಲಿಸುವ ದೃಷ್ಟಿಯಿಂದ ಮೈಸೂರು ನಗರ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ವಿವಿಧ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿರುವ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಮೈಸೂರು ನಗರದಲ್ಲಿ ಹಳೆಯ ವಿದ್ಯಾರ್ಥಿಗಳ ಸಂಘದ ಮೈಸೂರು ಶಾಖೆಯನ್ನು ಇತ್ತೀಚೆಗೆ ಆರಂಭಿಸಿ ಇತರೆ ಜಿಲ್ಲೆಗಳಿಗೆ ಮಾರ್ಗದರ್ಶಿಯಾಗಿದೆ.

ಈ ಸಂಘದ ಮೊದಲ ಸಭೆಯು ದಿನಾಂಕ ೨೩.೦೫.೨೦೦೦ ರಂದು ಮೈಸೂರಿನಲ್ಲಿ ಶ್ರೀ ಕೆ.ಎಂ. ವೀರಭದ್ರಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳು, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಂಶುಪಾಲರೂ ಆದ ಶ್ರೀ ಎಂ.ಎನ್. ಚನ್ನಬಸಪ್ಪನವರು, ಶ್ರೀ ಕ್ಷೇತ್ರದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯನವರು ಆಗಮಿಸಿದ್ದರು. ಈ ಸಭೆಯಲ್ಲಿ ನೂರಾರು ಜನ ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಭಾಗವಹಿಸಿದ್ದರು. ಶ್ರೀಕ್ಷೇತ್ರದಿಂದ ಹಳೆಯ ವಿದ್ಯಾರ್ಥಿ ಸಂಘದ ಸಹ ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯ, ಸಿದ್ಧಗಂಗಾ ಮಾಸ ಪತ್ರಿಕೆಯ ಶ್ರೀ ಎಂ. ರೇಣುಕಾರಾಧ್ಯ ಹಾಗೂ ವಿದ್ವಾನ್ ಕೆ.ಎಸ್. ಶಿವನಂಜಯ್ಯ ಅವರು ಉಪಸ್ಥಿತರಿದ್ದರು.

ಮೈಸೂರು ಶಾಖಾ ಸಂಘದ ಕಾರ್ಯದರ್ಶಿ ಶ್ರೀ ತಾಯೂರು ವಿಠಲಮೂರ್ತಿ ಸ್ವಾಗತಿಸಿದರು. ಸಂಘದ







ಮೈಸೂರು ನಗರದ ಮಾಜಿ ಮಹಾಪೌರರಾದ ಶ್ರೀ ಶ್ರೀಕಂಠಯ್ಯ ಅವರು ಮಾತನಾಡುತ್ತಿರುವುದು.

ಉಪಾಧ್ಯಕ್ಷರಾದ ಶ್ರೀ ಕೆ.ಎಂ. ರೇವಣಸಿದ್ಧಯ್ಯನವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಶಾಖೆಯು ಹಮ್ಮಿಕೊಂಡಿರುವ ಹಲವಾರು ಕಾರ್ಯಕ್ರಮಗಳ ಪರಿಚಯ ಮಾಡಿಕೊಟ್ಟರು. ಶ್ರೀ ಕೆ.ಎಸ್. ಶಿವನಂಜಯ್ಯನವರು ಈ ಸಂದರ್ಭದಲ್ಲಿ ಮಾತನಾಡಿ ಶ್ರೀ ಕ್ಷೇತ್ರದ ಸೇವಾ ಚಟುವಟಿಕೆಗಳನ್ನು ಗಮನದಲ್ಲಿಟ್ಟುಕೊಂಡು ಹಳೆಯ ವಿದ್ಯಾರ್ಥಿಗಳು ಹಾಗೂ ಅಭಿಮಾನಿಗಳು ಮಾಡಬಹುದಾದ ಹಲವಾರು ಕಾರ್ಯಕ್ರಮಗಳ ಬಗ್ಗೆ ಗಮನ ಸೆಳೆದರು. ಶ್ರೀ ಎಂ.ಎನ್. ಚನ್ನಬಸಪ್ಪನವರು ಶ್ರೀಕ್ಷೇತ್ರದ ಹಳೆ ವಿದ್ಯಾರ್ಥಿಸಂಘ ನಡೆದು ಬಂದ ದಾರಿಯ ಪ್ರಮುಖ ಹೆಜ್ಜೆಗುರುತುಗಳನ್ನು ಪರಿಚಯ ಮಾಡಿಕೊಟ್ಟರಲ್ಲದೆ, ಮಾಡಬೇಕಾದ ಕಾರ್ಯಕ್ರಮಗಳ ಒಂದು ಸ್ಥೂಲ ಪರಿಚಯ ಮಾಡಿಕೊಟ್ಟರು.





ಹಳೆಯ ವಿದ್ಯಾರ್ಥಿಗಳು ಮತ್ತು ಅಭಿಮಾನಿಗಳು

ಡಾ. ಕೆ.ಎಸ್. ತಿಮ್ಮಯ್ಯ ಮತ್ತು ಡಾ.ಕೆ.ಎಸ್. ಜಗದೀಶ ಅವರು ಮಾತನಾಡಿ ಮೈಸೂರು ಶಾಖಾ ಸಂಘದ ಆಶ್ರಯದಲ್ಲಿ ಮಾಡಬಹುದಾದ ಕಾರ್ಯಚಟುವಟಿಕೆಗಳನ್ನು ರೂಪಿಸುವ ಬಗ್ಗೆ ಪ್ರಸ್ತಾಪಮಾಡಿ ಇಂಕ್ಕೂ ಹೆಚ್ಚು ಹೆಚ್ಚುಜನ ಹಳೆ ವಿದ್ಯಾರ್ಥಿಗಳ ಹಾಗೂ ಅಭಿಮಾನಿಗಳಿಂದ ಸಲಹೆ-ಸೂಚನೆಗಳನ್ನು ಪಡೆದರು. ಸಭೆಯಲ್ಲಿ ಭಾಗವಹಿಸಿದ್ದ ಮೈಸೂರು ಮಹಾನಗರಪಾಲಿಕೆಯ ಮಾಜಿ ಮಹಾಪೌರರೂ ಹಾಗೂ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಆದ ಶ್ರೀಕಂಠಯ್ಯನವರು ಮಾತನಾಡಿ, ಪರಮಪೂಜ್ಯ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳು ಸಮಾಜಕ್ಕೆ ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿದರು.

ಸಭೆಯು ಸರ್ವಾನುಮತದಿಂದ ಈ ಕೆಳಕಂಡ ಮೈಸೂರು ಶಾಖೆಯ ಕಾರ್ಯಕಾರಿ ಸಮಿತಿಯನ್ನು ಆಯ್ಕೆಮಾಡಿತು.

| | | |
|---|---|---|
| ಶ್ರೀ ಕೆ.ಎಂ. ವೀರಭದ್ರಯ್ಯ | - | ಅಧ್ಯಕ್ಷರು |
| ಶ್ರೀ ಕೆ.ಎಂ. ರೇವಣಸಿದ್ಧಯ್ಯ | - | ಉಪಾಧ್ಯಕ್ಷರು |
| ಶ್ರೀ ತಾಯೂರು ವಿಠಲಮೂರ್ತಿ | - | ಕಾರ್ಯದರ್ಶಿ |
| ಶ್ರೀ ಬಿ.ಎಸ್. ಪರ್ವತರಾಜು | - | ಸಹಕಾರ್ಯದರ್ಶಿ |
| ಶ್ರೀ ಕೆ.ಎಸ್. ಪರಮಶಿವಯ್ಯ | - | ಖಜಾಂಚಿ |
| ಶ್ರೀ ಶ್ರೀಕಂಠಯ್ಯ | - | ಸದಸ್ಯರು |
| ಶ್ರೀ ಎಸ್. ಮುದ್ದಣ್ಣ | - | ಸದಸ್ಯರು |
| ಶ್ರೀ ಕೆ.ಎಸ್. ತಿಮ್ಮಯ್ಯ | - | ಸದಸ್ಯರು |
| ಶ್ರೀ ಕೆ.ಎಸ್. ಜಗದೀಶ್ | - | ಸದಸ್ಯರು |
| ಶ್ರೀ ರಂಗನಾಥ್ | - | ಸದಸ್ಯರು |
| ಶ್ರೀ ಹಳ್ಳಿದಾಸಪ್ಪ | - | ಸದಸ್ಯರು |
| ಶ್ರೀ ಬಿ. ತಿಮ್ಮೇಗೌಡ | - | ಸದಸ್ಯರು |

ಅಧ್ಯಕ್ಷತೆ ವಹಿಸಿದ್ದ ಶ್ರೀ ಕೆ.ಎಂ. ವೀರಭದ್ರಯ್ಯನವರು ಮಾತನಾಡಿ ಶ್ರೀಮಠ ಇಲ್ಲದೇ ಹೋಗಿದ್ದರೆ ಇವತ್ತು ಸಾವಿರಾರು ಜನರ ಭವಿಷ್ಯ ಕತ್ತಲೆಯಲ್ಲೇ ಕೊಳೆಯುತ್ತಿತ್ತು. ಪೂಜ್ಯಶ್ರೀಶ್ರೀಗಳವರ ದೂರದೃಷ್ಟಿ, ಬಡವರ ದೀನ-ದಲಿತರ ಬಗ್ಗೆ ಇರುವ ಕಳಕಳಿ ನಮ್ಮನ್ನು ಮನುಷ್ಯರನ್ನಾಗಿ ಮಾಡಿದೆ. ನಮ್ಮ ಭವಿಷ್ಯವನ್ನು ನಾವಷ್ಟೇ ರೂಪಿಸಿಕೊಂಡರೆ ಸಾಲದು, ಇತರರ ಭವಿಷ್ಯವನ್ನೂ ರೂಪಿಸುವ ಮಣಿಹದಲ್ಲಿ ಶ್ರೀಶ್ರೀಗಳವರಿಗೆ ನೆರವಾಗಬೇಕು ಎಂದು ತಿಳಿಸಿದರು. ಸಹಕಾರ್ಯದರ್ಶಿ ಶ್ರೀ ಪಿ.ಎಸ್. ಪರ್ವತರಾಜು ವಂದಿಸಿದರು.

**ವರದಿ : ಡಾ. ಕೆ.ಎಸ್. ಜಗದೀಶ್**

## ರಘುವನಹಳ್ಳಿಯಲ್ಲಿ

# ಗ್ರಾಮಾಂತರ ಬಸವ ಜಯಂತಿ




ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಆಶೀರ್ವಚನ

"ಬಸವಣ್ಣನವರು ಆಚರಿಸಿ ತೋರಿಸಿದ ಜೀವನ ಮಾರ್ಗ ಎಲ್ಲ ಕಾಲಕ್ಕೂ ಪ್ರಸ್ತುತ. ಅವರು ಮುಕ್ತ ವಿಚಾರವಾದಿ. ಮಾನವೀಯತೆಯ ಮಹಾದೀಪ. ಪ್ರಜಾಪ್ರಭುತ್ವದ ಬೀಜಾಂಕುರ ಮಾಡಿದ ಶ್ರೇಷ್ಠಚಿಂತಕ. ಕಾಯಕದಾಸೋಹಗಳನ್ನು ಬಿತ್ತಿ ಬೆಳೆದ ದೇವಕೃಷಿಕ. ನಡೆಯಲ್ಲಿ ಲಿಂಗ, ನುಡಿಯಲ್ಲಿ ಲಿಂಗ, ಜೀವನವೆಲ್ಲ ಲಿಂಗದ ಬೆಳಕಿನಲ್ಲಿ ಅರಳಿದ ಪವಿತ್ರ ಪ್ರವಾದಿ. ಜಗತ್ತಿನ ಧರ್ಮ ದೀಪಕರಲ್ಲಿ ವಿಶಿಷ್ಟವಾದ ವ್ಯಕ್ತಿತ್ವವನ್ನು ಬಸವಣ್ಣನವರಲ್ಲಿ ಕಾಣಬಹುದು. ಅವರು ಬೋಧಿಸಿದ್ದು, ಆಚರಿಸಿ ತೋರಿಸಿದ್ದು 'ಇಲ್ಲಿ ಸಲ್ಲುವ' ಜೀವನವನ್ನು. ಧರ್ಮ ಲೌಕಿಕ ಬದುಕಿನಿಂದ ಪ್ರತ್ಯೇಕವಾದದ್ದಲ್ಲ ಎಂಬುದೇ ಅವರ ಸಂದೇಶ" ಎಂಬುದಾಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ರಘುವನಹಳ್ಳಿಯಲ್ಲಿ ಜೂನ್ ೧೮ರಂದು ನಡೆದ ಗ್ರಾಮಾಂತರ ಬಸವ ಜಯಂತಿಯ ನೇತೃತ್ವ ವಹಿಸಿ ಆಶೀರ್ವಚನ ನೀಡಿದರು.

ಸುತ್ತೂರು ಸಂಸ್ಥಾನದ ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು, ಅಧ್ಯಕ್ಷ ಸ್ಥಾನದಿಂದ ಆಶೀರ್ವಚನ ನೀಡುತ್ತಾ, "ಕೊಲೆ, ಸುಲಿಗೆ, ಮೋಸ ಮುಂತಾದ ಅನೈತಿಕ, ಅಧಾರ್ಮಿಕ ಜೀವನದ ಜಂಜಾಟದಲ್ಲಿ ನರಳುತ್ತಿರುವ ಇಂದಿನ ಸಮಾಜಕ್ಕೆ ಬಸವಾದಿ ಶರಣರ ಸತ್ಯಶುದ್ಧ (ಕಾಯಕ) ಪ್ರಾಮಾಣಿಕ ಪರಹಿತದ ಜೀವನ ಪಥ ಆದರ್ಶವಾಗಿದೆ" ಎಂದು ತಿಳಿಸಿದ ಶ್ರೀಗಳು "ಇಂದಿನ ಯುವಜನಾಂಗ ಗಂಭೀರ ಚಿಂತನೆಯಲ್ಲಿ ತೊಡಗಬೇಕಾಗಿದೆ" ಎಂದು ನುಡಿದರು.

ಬಸವಣ್ಣ ಕಲಿಸಿದ ಮಂತ್ರ ಉತ್ತು ಬಿತ್ತುವ ಮಂತ್ರ,







ಪೂಜ್ಯ ಶ್ರೀಶ್ರೀಗಳವರಿಗೆ ಪುಷ್ಪವೃಷ್ಟಿ



ಪ್ರೇಕ್ಷಕರು

ಬಿತ್ತಿ ಬೆಳೆಯುವ ಮಂತ್ರ ಎನ್ನುತ್ತ ಕಾಯಕ ದಾಸೋಹ ಸಂಸ್ಕೃತಿಯ ಸುಸಂಸ್ಕೃತ ಜೀವನ ವಿಧಾನವನ್ನು ಬೇಲಿಮಠದ ಪೂಜ್ಯ ಶ್ರೀ ಶಿವರುದ್ರ ಸ್ವಾಮಿಗಳು ಸಮಾರಂಭದ ಉದ್ಘಾಟನೆಯನ್ನು ಮಾಡುತ್ತ ನುಡಿದರು.

ಇದೇ ಸಂದರ್ಭದಲ್ಲಿ ಕನಕಪುರದ ದೇಗುಲಮಠದ ಪೂಜ್ಯ ಶ್ರೀ ಮುಮ್ಮಡಿ ಮಹಾಲಿಂಗ ಸ್ವಾಮಿಗಳು, ಮಾಳೀಗವಿಮಠದ ಪೂಜ್ಯ ಶ್ರೀ ಶಿವರುದ್ರ ಸ್ವಾಮಿಗಳು, ಶಿವಗಂಗೆಯ ಹೊನ್ನಮ್ಮಗವಿಮಠದ ಪೂಜ್ಯ ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಆಶೀರ್ವಚನ ನೀಡಿದರು.

ಭರತಖಂಡ ಜಗತ್ತಿಗೆ ಆಧ್ಯಾತ್ಮದ ಬೆಳಕನ್ನು ಕೊಟ್ಟ ಪವಿತ್ರರಾಷ್ಟ್ರವೆಂಬುದಾಗಿ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ ಅಶೋಕ್ ಅವರು ಮಾತನಾಡಿದರು.

ಮುಖ್ಯ ಉಪನ್ಯಾಸಕರಾಗಿ ಆಗಮಿಸಿದ್ದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು, ಜನಪದರು ಕಂಡ ಬಸವಣ್ಣನವರ ಪರಿಚಯವನ್ನು ಮಾಡಿಕೊಟ್ಟರು.

ಈ ಶುಭಸಂದರ್ಭದಲ್ಲಿ ವಿಶ್ವವಿಭೂತಿ ಬಸವಣ್ಣನವರ ಸಿದ್ಧಗಂಗಾ ಮಠದ ಲಿಂಗೈಕ್ಯ ಪೂಜ್ಯ ಉದ್ದಾನ ಶಿವಯೋಗಿಗಳವರ ಹಾಗೂ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಾವಚಿತ್ರಗಳನ್ನು ಅನಾವರಣ ಮಾಡಲಾಯಿತು.

ಸಮಾರಂಭದ ಅಂಗವಾಗಿ ಅಂದು ರಾತ್ರಿ ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶಿಸಲಾಯಿತು.

ಸಮಾರಂಭದಲ್ಲಿ ಸ್ವಾಗತ ಶ್ರೀ ಸಿದ್ಧಬಸಯ್ಯನವರಿಂದ ವಂದನಾರ್ಪಣೆ; ನ್ಯಾಯವಾದಿ ಶ್ರೀ ರಾಜಶೇಖರ್ ಅವರಿಂದ ನಡೆಯಿತು.

ಸಮಾಜ ಸೇವಕರೂ, ದಾನಿಗಳೂ ಆದ ಯಜಮಾನ್ ಶ್ರೀ ಚಿಕ್ಕವೀರಪ್ಪನವರು ಸಮಾರಂಭವನ್ನು ವ್ಯವಸ್ಥಿತವಾಗಿ ಏರ್ಪಡಿಸಿದ್ದರು.

ವರದಿ : ಎಂ. ರೇಣುಕಾರಾಧ್ಯ

ಉತ್ತು ಬಿತ್ತುವಮಂತ್ರ ಬಿತ್ತಿ ಬೆಳೆಯುವ ಮಂತ್ರ
ಸತ್ಯ ಶಿವಮಂತ್ರ ನಿನ್ನೆಸರು । ಬಸವಯ್ಯ
ಮರ್ತ್ಯದೊಳು ಮಂತ್ರ ಜೀವನಕೆ ॥

* * * *

ಕಾಯಕವ ಕಲಿಸುದಕೆ ನಾಯಕನು ಬಸವಯ್ಯ
ಜೀಯ ಹೊಸಮತಕೆ ಶಿವಭಕ್ತಿ । ಸಾರುದಕೆ
ರಾಯ ಜೀವನದ ಹೊಸನುಡಿಗೆ

ಉಂಡುತೇಗಿತು ಲೋಕ ಕೊಂಡಾಡಿ ಕಾಯಕವ
ಕಂಡಕಂಡಲ್ಲಿ ದಾಸೋಹ । ಕಾಯಕದ
ಕಂಡ ಜೀವನದ ಶಿವಮಾತು ॥

* * * *

ಬಸವ ಭಕ್ತಿಯ ಬೀಜ ಬಸವ ಮುಕ್ತಿಯ ತೇಜ
ಬಸವ ಕಾಯಕದ ಗುರು ಬೀಜ । ಶಿವಮತಕೆ
ಬಸವ ಓಂಕಾರ ಶಿವನಾಮೊ ॥

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. ಹೆಸರು ಮತ್ತು ವಿಳಾಸ | ಮೊತ್ತ |
|---|---|
| ೨೬೦. ಶ್ರೀಮತಿ ನಳಿನಾ ಚಂದ್ರಶೇಖರ್ ಮತ್ತು ಶ್ರೀಮತಿ ಶಾರದಾ ನಿರಂಜನಮೂರ್ತಿ, ನಂ. ೧೯೯, 'ಆಶೀರ್ವಾದ', ೨ನೇ ಹಂತ, ಆತ್ಮೀಯ ಗೆಳೆಯರ ಬಳಗ, ಮಹಾಲಕ್ಷ್ಮೀಪುರಂ, ಬೆಂಗಳೂರು-೫೬೦ ೦೮೬ | ೧,೦೦೧-೦೦ (೧ನೇ ಕಂತು) |
| ೨೬೧. ಶ್ರೀ ಮಂಜುನಾಥ ಕೆ.ಎಂ.ಎಫ್, ಎಸ್.ಆರ್.ಎಸ್. ಕಾಂಪೌಂಡ್, ಶಾಂತಿನಗರ, ತುಮಕೂರು-೫೭೨ ೧೦೧. | ೧,೦೦೧-೦೦ (೧ನೇ ಕಂತು) |
| ೨೬೨. ಶ್ರೀಮತಿ ಚನ್ನಬಸಮ್ಮ ರುದ್ರಮುನಿಸ್ವಾಮಿ, ದ್ವಾರಾ ಶ್ರೀ ಜೆ. ನಾಗಭೂಷಣ ಶಾಸ್ತ್ರಿ, ಕುವೆಂಪುನಗರ, ಕೋಟೆ, ಚಿಕ್ಕಮಗಳೂರು. | ೨,೯೦೦-೦೦ |
| ೨೬೩. ಶ್ರೀ ರಂಗಯ್ಯ, ನಂ. ೩೬, ೧೧ನೇ 'ಸಿ' ಕ್ರಾಸ್, ೫ನೇ 'ಸಿ' ಮೇನ್, ನಾಗಪುರ, ವೆಸ್ಟ್ ಆಫ್ ಕಾರ್ಡ್ ರಸ್ತೆ, ಬೆಂಗಳೂರು-೫೬೦ ೦೮೬ | ೧,೦೫೧-೦೦ (೧ನೇ ಕಂತು) |
| ೨೬೪. ಶ್ರೀ ಸಿ.ಎಸ್. ಗುರುಮೂರ್ತಿ, ೧೦೭/೬, ಗಾಯಿತ್ರಿದೇವಿ ಪಾರ್ಕ್ ಬಡಾವಣೆ, ವೈಯಾಲಿಕಾವಲ್, ಬೆಂಗಳೂರು-೫೬೦ ೦೦೩ | ೩,೦೦೧-೦೦ |
| ೨೬೫. ಶ್ರೀ ಬಿ. ರುದ್ರಾರಾಧ್ಯ, ನಂ. ೫೭೬, ಮಾಧವನಗರ, ಮುತ್ಸಂದ್ರ ರಸ್ತೆ, ವರ್ತೂರು, ಸರಹುಣಸೆ, ಬೆಂಗಳೂರು ದಕ್ಷಿಣ. | ೨,೧೦೧-೦೦ |
| ೨೬೬. ಶ್ರೀ ಸಿ. ಶಂಕರಪ್ಪ ಮತ್ತು ಕುಟುಂಬ, "ವೀರೇಶ ನಿಲಯ", ನಂ. ೮೫೬/೬೩, ೩ನೇ ಮೇನ್ ರೋಡ್, ೩ನೇ ಕ್ರಾಸ್, ೨ನೇ ಹಂತ, ಡಿ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦ ೦೧೦ | ೨,೧೦೧-೦೦ |
| ೨೬೭. ಶ್ರೀಮತಿ ಬಿ. ಶಿವಮ್ಮ ಮತ್ತು ಮಕ್ಕಳು, ನಂ. ೩೫೭, ಸರಸ್ವತಿ ನಗರ, ವಿಜಯನಗರ, ಬೆಂಗಳೂರು-೫೬೦ ೦೪೦ | ೧,೦೦೦-೦೦ (೧ನೇ ಕಂತು) |
| ೨೬೮. ಶ್ರೀ ತೋಟದ ಶಿವರುದ್ರಯ್ಯ, ತಂದೆ ರುದ್ರಯ್ಯ, ವೀರೇಗೌಡನದೊಡ್ಡಿ, ಮಾಗಡಿ ತಾಲ್ಲೂಕು. | ೨,೧೦೧-೦೦ |
| ೨೬೯. ಶ್ರೀ ಕೆ.ಬಿ. ಜಯಣ್ಣ, ಕಾರ್ಯದರ್ಶಿ, ಶ್ರೀ ವಿದ್ಯಾವಾಹಿನಿ ಶಿಕ್ಷಣ ಸಂಸ್ಥೆ, ಕ್ಯಾತಸಂದ್ರ, ತುಮಕೂರು-೫೭೨ ೧೦೪ | ೫,೧೦೧-೦೦ |
| ೨೭೦. ಶ್ರೀ ಎಸ್.ಜಿ. ಚಂದ್ರಮೌಳಿ, ಮಾಲೀಕರು, ಶ್ರೀ ವಿಘ್ನೇಸ್ವರ ಕಂಫರ್ಟ್ಸ್, ಸರ್ಕಾರಿ ಕಾಲೇಜಿನ ಎದುರುಗಡೆ, ಬಿ.ಹೆಚ್. ರಸ್ತೆ, ತುಮಕೂರು-೫೭೨ ೧೦೨. | ೨೫,೦೦೦-೦೦ |
| ೨೭೧. ಶ್ರೀಮತಿ ಎಸ್. ಮಂಜುಳ, C/o ಬಿ.ವಿ. ಬಸವರಾಜು, ನಂ. ೨೬೧/A, ಶ್ರೀ ಬಸವಕೃಪ, ಎಂ.ಹೆಚ್.ಎಸ್. ರಸ್ತೆ, ಜಯಲಕ್ಷ್ಮಿಪುರಂ, ಮೈಸೂರು-೧೨. | ೨,೦೦೧-೦೦ |
| ೨೭೨. ಶ್ರೀ ಆರ್. ಶಿವಕುಮಾರಸ್ವಾಮಿ, ತಂದೆ ಎಂ. ರೇವಣಸಿದ್ಧಯ್ಯ, ನಂ. ೬೦೬, ವಿಶ್ವಮಾನವ ಡಬಲ್ ರಸ್ತೆ, ಕುವೆಂಪುನಗರ, ಮೈಸೂರು-೫೭೦ ೦೨೩. | ೧,೦೦೧-೦೦ (೧ನೇ ಕಂತು) |
| ೨೭೩. ಶ್ರೀ ಆರ್.ಎಂ. ಪ್ರಭು, ತಂದೆ ರೇವಣಸಿದ್ಧಯ್ಯ, ನಂ. ೬೦೬, ವಿಶ್ವಮಾನವ ಡಬಲ್ ರಸ್ತೆ, ಕುವೆಂಪುನಗರ, ಮೈಸೂರು-೫೭೦ ೦೨೩. | ೧,೦೦೧-೦೦ (೧ನೇ ಕಂತು) |
| ೨೭೪. ಶ್ರೀಮತಿ ವಾಸಂತಿ ಪಲ್ಯಾರ್, ನಂ. ೧೨/೪, "ಸುಮುಖ", ಮಿರ್ಜಾ ರಸ್ತೆ, ನಜರಾಬಾದ್, ಮೈಸೂರು-೫೭೦ ೦೧೦. | ೧,೦೦೧-೦೦ (೧ನೇ ಕಂತು) |

(ಮುಂದುವರಿಯುತ್ತದೆ)

RNI No. 17139/69 "Siddaganga" Monthly - Postal Reg. No. KA/SK/TMR/385/2000



ಮೈಸೂರಿನಲ್ಲಿ ಮೈಸೂರು ನಗರಪಾಲಿಕೆ ಏರ್ಪಡಿಸಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವೃತ್ತದ ನಾಮಕರಣ ಸಮಾರಂಭವನ್ನು ಮೇಯರ್ ಶ್ರೀ ಶ್ರೀಕಂಠಯ್ಯ ಅವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.




ಸಮಾರಂಭದಲ್ಲಿ ಲೋಕಸಭಾ ಸದಸ್ಯರಾದ ಶ್ರೀ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ಅವರು ಭಾಷಣ ಮಾಡುತ್ತಿರುವುದು